4(1)(ಬಿ) **(xii)**

**ಸಹಾಯ ಧನ ಕಾರ್ಯಕ್ರಮ ಕಾರ್ಯಗತಗೊಳಿಸುವ ವಿಧಾನ, ಹಂಚಿಕೆ ಮಾಡಿದ ಮೊತ್ತ ಸೇರಿದಂತೆ ಹಾಗೂ ಅಂತಹ ಕಾರ್ಯಕ್ರಮಗಳ ಫಲಾನುಭವಿಗಳ ವಿವರಗಳು:**

-------------------- ಇರುವುದಿಲ್ಲ. --------------------

4(1)(ಬಿ) **(xiii)**

**ಇಲಾಖೆ ಮಂಜೂರು ಮಾಡಿದ ರಿಯಾಯಿತಿಗಳು, ಪರ್ಮಿಟ್‌ಗಳು ಅಥವಾ ಅಧಿಕಾರ ಪತ್ರದ ಸ್ವೀಕೃತಿದಾರರ ವಿವರ:**

-------------------- ಇರುವುದಿಲ್ಲ. --------------------

4(1)(ಬಿ) **(xiv)**

**ವಿದ್ಯುನ್ಮಾನ ರೂಪದಲ್ಲಿ ಇಲಾಖೆ ಹೊಂದಿರುವ ಅಥವಾ ಲಭ್ಯವಿರುವ ಮಾಹಿತಿಗಳು:**

ಹಾಲಿ ಇಲಾಖೆಯ ಕೆಲಸ ಕಾರ್ಯಗಳು ಗಣಕೀಕರಣಗೊಂಡಿರುವುದಿಲ್ಲ. ಇದರಂತೆ ಯಾವುದೇ ಮಾಹಿತಿ ವಿದ್ಯುನ್ಮಾನ ರೂಪದಲ್ಲಿ ಲಭ್ಯವಿಲ್ಲ ಅಥವಾ ಹೊಂದಿರುವುದಿಲ್ಲ. ಇಲಾಖೆಯ ಸಂಕ್ಷಿಪ್ತ ಮಾಹಿತಿ ಹಾಗೂ ಲೆಕ್ಕಪರಿಶೋಧನಾ ಫಲಿತಾಂಶ ಆಧರಿಸಿದ ಸಹಕಾರ ಸಂಘಗಳ ಕಾರ್ಯನಿರ್ವಹಣೆಯ ಸಂಕ್ಷಿಪ್ತ ರೂಪವನ್ನು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಲು ರಾಷ್ಟ್ರೀಯ ಸೂಚನಾ ವಿಜ್ಞಾನ ಕೇಂದ್ರ (N.I.C.), ಬೆಂಗಳೂರು ರವರ ಸಹಯೋಗದಿಂದ ಇಲಾಖೆ **"ಸಹಕಾರ ದರ್ಪಣ"** ಎಂಬ ವೆಬ್‌ಸೈಟ್ ಅಭಿವೃದ್ಧಿ ಪಡಿಸಿದೆ. ಇಲಾಖೆಯ ವೆಬ್‌ಸೈಟ್ ಬಗ್ಗೆ ಈ ಕೆಳಕಂಡ ವಿಳಾಸಕ್ಕೆ ಭೇಟಿ ನೀಡಿ.

*http://sahakaradarpana.kar.nic.in*

4(1)(ಬಿ) **(xv)**

**ಮಾಹಿತಿ ಪಡೆಯಲು ನಾಗರೀಕರಿಗೆ ಲಭ್ಯವಿರುವ ಸೌಲಭ್ಯಗಳ ವಿವರಗಳು, ಗ್ರಂಥಾಲಯ ಅಥವಾ ಓದುವ ಕೊಠಡಿ ನಿರ್ವಹಿಸಿದ್ದರೆ ಕೆಲಸದ ವೇಳೆಯೊಂದಿಗೆ:**

ಸಾರ್ವಜನಿಕರ ಉಪಯೋಗಕ್ಕಾಗಿ ಗ್ರಂಥಾಲಯ ಅಥವಾ ವಾಚನಾಲಯವನ್ನು ಕಛೇರಿ ಹೊಂದಿರುವುದಿಲ್ಲ. ಸಾರ್ವಜನಿಕರು ಸಾಮಾನ್ಯ ಮಾಹಿತಿಯನ್ನು ಕಛೇರಿ ವೇಳೆಯಲ್ಲಿ ಕಛೇರಿ ಮುಖ್ಯಸ್ಥರಿಂದ/ಸಿಬ್ಬಂದಿಯವರಿಂದ ಪಡೆಯಲು ಅವಕಾಶ ಇರುತ್ತದೆ.

4(1)(ಬಿ) **(xvi)**

**ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿ, ರಾಜ್ಯ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಅಪೀಲು ವಿಚಾರಣಾ ಪ್ರಾಧಿಕಾರಿಯ ಪದನಾಮ ಮತ್ತು ಇತರೆ ವಿವರಗಳು ಈ ಕೆಳಕಂಡಂತಿದ್ದು, ಇವರುಗಳನ್ನು** ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ, ನಂ.17, ಜಯನಿವಾಸ, ಶಂಕರಮಠ ರಸ್ತೆ, ಬಸವನಗುಡಿ, ಬೆಂಗಳೂರು– 560 004, ಈ ವಿಳಾಸದಲ್ಲಿ ಸಂಪರ್ಕಿಸಬಹುದು.

| **ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಗಳು** | **ರಾಜ್ಯ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ** | **ಅಪೀಲು ವಿಚಾರಣಾ ಪ್ರಾಧಿಕಾರಿ** |
|---|---|---|
| ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಉಪ ನಿರ್ದೇಶಕರು, ದೂ.ಸಂ.:26604491 (ಆಡಳಿತ ಮತ್ತು ಸಿಬ್ಬಂದಿ), ಕೇಂದ್ರ ಕಛೇರಿ, ಬೆಂಗಳೂರು. (ಆಡಳಿತ ಮತ್ತು ಸಿಬ್ಬಂದಿ ವಿಷಯಕ್ಕೆ ಸಂಬಂಧಿಸಿದಂತೆ) | 1. ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರು (ಆಡಳಿತ ಮತ್ತು ಸಿಬ್ಬಂದಿ), ದೂ.ಸಂ.: 26610610 (ಆಡಳಿತ ಮತ್ತು ಸಿಬ್ಬಂದಿವಿಷಯಕ್ಕೆ ಸಂಬಂಧಿಸಿದಂತೆ)<br>2. ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರು (ಲೆಕ್ಕ ಮತ್ತು ಆಯವ್ಯಯ), ದೂ.ಸಂ.: 26610610 (ಲೆಕ್ಕ ಮತ್ತು ಆಯವ್ಯಯ ವಿಷಯಕ್ಕೆ ಸಂಬಂಧಿಸಿದಂತೆ) | ಸಹಕಾರ ಸಂಘಗಳ ಲೆಕ್ಕಪರಿ ಶೋಧನಾ ಜಂಟಿ ನಿರ್ದೇಶಕರು (ಆಡಳಿತ ಮತ್ತು ಸಿಬ್ಬಂದಿ), ದೂ.ಸಂ.: 26610610 |
| ನಿರ್ದೇಶಕರ ಪತ್ರಾಂಕಿತ ಆಪ್ತ ಸಹಾಯಕರು ದೂ.ಸಂ.: 26610326 (ನಿರ್ದೇಶಕರ ಆಪ್ತ ಶಾಖೆಗೆ ಸಂಬಂಧಿಸಿದಂತೆ) | 1. ನಿರ್ದೇಶಕರ ಪತ್ರಾಂಕಿತ ಆಪ್ತ ಶಾಖೆಯ ಶೀಘ್ರಲಿಪಿಗಾರರು / ದ್ವಿತೀಯ ದರ್ಜೆ ಸಹಾಯಕರು, ದೂ.ಸಂ.: 26610326 | |

| ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಗಳು | ರಾಜ್ಯ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಅಪೀಲು ವಿಚಾರಣಾ ಪ್ರಾಧಿಕಾರಿ |
|---|---|---|
| ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಉಪ ನಿರ್ದೇಶಕರು (ಲೆಕ್ಕಪರಿಶೋಧನೆ) ದೂ.ಸಂ.: 26604493 (ಲೆಕ್ಕಪರಿಶೋಧನೆ–1 ವಿಷಯಕ್ಕೆ ಸಂಬಂಧಿಸಿದಂತೆ) | 1. ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರು (ಲೆಕ್ಕಪರಿಶೋಧನೆ–1), ದೂ.ಸಂ.: 26610372 (ಲೆಕ್ಕಪರಿಶೋಧನೆ–1 ವಿಷಯಕ್ಕೆ ಸಂಬಂಧಿಸಿದಂತೆ) | ಸಹಕಾರ ಸಂಘಗಳ ಲೆಕ್ಕಪರಿ ಶೋಧನಾ ಜಂಟಿ ನಿರ್ದೇಶಕರು (ಲೆಕ್ಕಪರಿಶೋಧನೆ–1), ದೂ.ಸಂ.: 26610372 (ಲೆಕ್ಕಪರಿಶೋಧನೆ–1 ವಿಷಯಕ್ಕೆ ಸಂಬಂಧಿಸಿದಂತೆ). |
| ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರು (ಲೆಕ್ಕಪರಿಶೋಧನೆ–2) ದೂ.ಸಂ.: 26608579 (ಲೆಕ್ಕಪರಿಶೋಧನೆ–2 ವಿಷಯಕ್ಕೆ ಸಂಬಂಧಿಸಿದಂತೆ) | 1. ಸಹಕಾರ ಸಂಘಗಳ ಹಿರಿಯ ಲೆಕ್ಕ ಪರಿಶೋಧಕರು (ಲೆಕ್ಕಪರಿಶೋಧನೆ–2), ದೂ.ಸಂ.: 26608579 (ಲೆಕ್ಕಪರಿಶೋಧನೆ–2ವಿಷಯಕ್ಕೆ ಸಂಬಂಧಿಸಿದಂತೆ) | ಸಹಕಾರ ಸಂಘಗಳ ಲೆಕ್ಕಪರಿ ಶೋಧನಾ ಜಂಟಿ ನಿರ್ದೇಶಕರು (ಲೆಕ್ಕಪರಿಶೋಧನೆ–2), ದೂ.ಸಂ.: 26608579 (ಲೆಕ್ಕಪರಿಶೋಧನೆ–2 ವಿಷಯಕ್ಕೆ ಸಂಬಂಧಿಸಿದಂತೆ). |
| ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಉಪ ನಿರ್ದೇಶಕರು (ತನಿಖೆ ಮತ್ತುಪರಿಶೀಲನಾ ಘಟಕ) ದೂ.ಸಂ.: 26604502 (ತನಿಖಾ ಮತ್ತುಪರಿಶೀಲನಾ ಘಟಕದ ವಿಷಯಕ್ಕೆ ಸಂಬಂಧಿಸಿದಂತೆ) | 1. ಸಹಕಾರ ಸಂಘಗಳ ಲೆಕ್ಕಪರಿ ಶೋಧನಾ ಸಹಾಯಕ ನಿರ್ದೇಶಕರು –1 (ತನಿಖೆ ಮತ್ತು ಪರಿಶೀಲನಾ ಘಟಕ), ದೂ.ಸಂ.: 26507307 (ತನಿಖೆ ಮತ್ತು ಪರಿಶೀಲನಾ ಘಟಕದ ವಿಷಯಕ್ಕೆ ಸಂಬಂಧಿಸಿದಂತೆ)<br>2. ಸಹಕಾರ ಸಂಘಗಳ ಲೆಕ್ಕಪರಿ ಶೋಧನಾ ಸಹಾಯಕ ನಿರ್ದೇಶಕರು –2 (ತನಿಖೆ ಮತ್ತು ಪರಿಶೀಲನಾ ಘಟಕ), ದೂ.ಸಂ.: 26507307 (ತನಿಖೆ ಮತ್ತು ಪರಿಶೀಲನಾ ಘಟಕದ ವಿಷಯಕ್ಕೆ ಸಂಬಂಧಿಸಿದಂತೆ) | ಸಹಕಾರ ಸಂಘಗಳ ಲೆಕ್ಕಪರಿ ಶೋಧನಾ ಜಂಟಿ ನಿರ್ದೇಶಕರು (ತನಿಖೆ ಮತ್ತು ಪರಿಶೀಲನಾ ಘಟಕ), ದೂ.ಸಂ.: 26507307 (ತನಿಖೆ ಮತ್ತು ಪರಿಶೀಲನಾ ಘಟಕ ವಿಷಯಕ್ಕೆ ಸಂಬಂಧಿಸಿದಂತೆ). |

**4(1)(ಬಿ) (xvii)**

**ನಿಗದಿಪಡಿಸಿದ ಇತರೆ ಮಾಹಿತಿಗಳು:**

ನಿರ್ದೇಶನಾಲಯದಲ್ಲಿ ಸಾರ್ವಜನಿಕ ಕುಂದುಕೊರತೆಗೆ ಸಂಬಂಧಿಸಿದಂತೆ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಜಂಟಿ ನಿರ್ದೇಶಕರು (ತನಿಖೆ ಮತ್ತು ಪರಿಶೀಲನಾ ಘಟಕ), ಇವರನ್ನು ಜನಸ್ಪಂದನಾ ಕೋಶದ ಸಾರ್ವಜನಿಕ ಕುಂದುಕೊರತೆ ನಿವಾರಣಾ ಅಧಿಕಾರಿಯನ್ನಾಗಿ ನೇಮಿಸಲಾಗಿದೆ. ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 ರಂತೆ ಕಂಡಿಕೆ (4)(1)(ಬಿ) (xvi) ರಲ್ಲಿ ತಿಳಿಸಿದ ಅಧಿಕಾರಿಗಳನ್ನು ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿ, ರಾಜ್ಯ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಅಪೀಲು ವಿಚಾರಣಾ ಪ್ರಾಧಿಕಾರಿಯನ್ನಾಗಿ ಗೊತ್ತುಪಡಿಸಲಾಗಿದೆ. ನಿರ್ದೇಶನಾಲಯದಲ್ಲಿ ಮಹಿಳಾ ಉದ್ಯೋಗಿಗಳ ಕುಂದುಕೊರತೆ ನಿವಾರಣಾ ಸಮಿತಿ ರಚಿಸಲಾಗಿದ್ದು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು (ಆಡಳಿತ ಮತ್ತು ಸಿಬ್ಬಂದಿ), ಇವರನ್ನು ಅಧ್ಯಕ್ಷರನ್ನಾಗಿ ನೇಮಕಾತಿ ಮಾಡಲಾಗಿದೆ. ನಿರ್ದೇಶನಾಲಯದಲ್ಲಿ ಪ್ರತಿ ತಿಂಗಳ ಮೊದಲನೇ ಹಾಗೂ ಮೂರನೇ ಶನಿವಾರವನ್ನು ಸಾರ್ವಜನಿಕ ಕುಂದುಕೊರತೆ ನಿವಾರಣಾ ದಿನವನ್ನಾಗಿ ನಿಗದಿಪಡಿಸಲಾಗಿದ್ದು, ಸಂಬಂಧಿತ ಜಂಟಿ ನಿರ್ದೇಶಕರು ಸಾರ್ವಜನಿಕ ಕುಂದು ಕೊರತೆಗಳನ್ನು ಆಲಿಸುತ್ತಾರೆ.

ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು
(ಆಡಳಿತ ಮತ್ತು ಸಿಬ್ಬಂದಿ)
ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ,
ಬೆಂಗಳೂರು ಹಾಗೂ ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿ.

ಪಿ.ಆರ್.474

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ.**
**ಡಿಟಿಸಿಆರ್/49/2006–07, ದಿನಾಂಕ:13ನೇ ಮಾರ್ಚ್, 2009**

ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ನಾಗಮಂಗಲ ತಾಲ್ಲೂಕು ಇವರ ಪ್ರ.ಮಾ.ವ ಸಂ:03/2006–07, ದಿನಾಂಕ:28–06–2007.

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು,<br>ಜಾರಿ ಮತ್ತು ತನಿಖೆ, ನಾಗಮಂಗಲ ತಾಲ್ಲೂಕು. | ತಲೆ ಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:28.06.2007 ರಂದು ಬೆಳಿಗ್ಗೆ 10–30 ಗಂಟೆ ಸಮಯದಲ್ಲಿ ನಾಗಮಂಗಲ ತಾಲ್ಲೂಕು ನಾಗಮಂಗಲ–ಬೆಳ್ಳೂರು ರಸ್ತೆ, ಅಂಚೆಚಿಟ್ಟನಹಳ್ಳಿ ಗ್ರಾಮದಿಂದ ಸುಮಾರು ಅರ್ಧ ಕಿ.ಮೀ ದೂರದಲ್ಲಿರುವ ಸೇತುವೆಗೆ ಹೊಂದಿಕೊಂಡಂತೆ ಇರುವ ತಿಬ್ಬದ ಕೆಳಗೆ ಅಕ್ರಮವಾಗಿ 570.000 ಲೀ ಮದ್ಯಸಾರವನ್ನು ಟಾಟಾ ಸುಮೋ ನೊಂದಣಿ ಸಂಖ್ಯೆ:ಕೆಎ–05/ಎನ್–8932 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 14 ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 34, 38(ಎ), ಮತ್ತು43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯಸಾರವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ: 03/2006–07 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯಸಾರದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಮಾನವನ ಸೇವನೆಗೆ ಬಳಸಬಹುದಾದ ಮದ್ಯವನ್ನು ತಯಾರಿಸಲು ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ಹಾಗೂ ವಾಹನದ "ಬಿ" ವಹಿಯ ಪ್ರಕಾರ ಜಪ್ತುಪಡಿಸಿರುವ ವಾಹನದ ಇಂಜಿನ್ ಸಂಖ್ಯೆಗೂ ಹಾಗೂ ಚಾಸಿಸ್ ಸಂಖ್ಯೆಗೂ ವ್ಯತ್ಯಾಸವಿರುವುದರಿಂದ, ವಾಹನ ಹಾಗೂ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:04.09.2007 ಮತ್ತು 21.04.2008 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು, ಮದ್ಯಸಾರವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:02.01.2008 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ದಕ್ಷಿಣ) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂ: ಕೆಎ–05/ಎನ್–8932ಗೆ ಸಂಬಂಧಿಸಿದಂತೆ ಎಸ್.ಮಣಿವಸಕನ್, 2ನೇ ಕ್ರಾಸ್, ಚಂದ್ರೋದಯ ಕಲ್ಯಾಣ ಮಂಟಪದ ಎದುರು, ಭವಾನಿ ನಗರ, ಬನ್ನೇರುಘಟ್ಟ ರಸ್ತೆ, ಡಿ.ಆರ್.ಕಾಲೇಜು, ಬೆಂಗಳೂರು ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:27.09.2008 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮತ್ತು ಅಬಕಾರಿ ನಿರೀಕ್ಷಕರು, ನಾಗಮಂಗಲ ವಲಯ ಇವರ ಮೂಲಕ ನೀಡಲಾಗಿತ್ತು.

ಕಾರಣ ಕೇಳುವ ನೋಟೀಸ್ ನೊಂದಣಿ ಅಂಚೆ ಮೂಲಕ ಹಾಗೂ ಅಬಕಾರಿ ನಿರೀಕ್ಷಕರ ಮೂಲಕ ವಾಹನದ ಮಾಲೀಕರಿಗೆ ಜಾರಿಯಾಗಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಾಟಾ ಸುಮೋ ನೊಂದಣಿ ಸಂಖ್ಯೆ: ಕೆಎ–05/ಎನ್–8932 ವಾಹನದಲ್ಲಿ ದಿನಾಂಕ:28.06.2007 ರಂದು ಅಕ್ರಮವಾಗಿ ಮದ್ಯಸಾರ ಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಹಾಗೂ ಇಂತಹ ಘೋರ ಕೃತ್ಯಕ್ಕಾಗಿಯೇ ಬಳಸಲು ವಾಹನದ ಚಾರ್ಸಿ ನಂಬರ್ ಮತ್ತು ಇಂಜಿನ್ ನಂಬರ್‌ಗಳನ್ನು ಬದಲಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಅಲ್ಲದೇ ಜಪ್ತು ಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/49/2006–07, ದಿನಾಂಕ:13ನೇ ಮಾರ್ಚ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ನಾಗಮಂಗಲ ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ:

03/2006–07, ದಿನಾಂಕ:28.06.2007 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಟಾಟಾ ಸುಮೋ ನೊಂದಣಿ ಸಂಖ್ಯೆ: ಕೆಎ–05/ಎನ್–8932 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:13.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸ ಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.339

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/241/2007–08, ದಿನಾಂಕ:13ನೇ ಮಾರ್ಚ್, 2009**

ಅಬಕಾರಿ ಉಪ ನಿರೀಕ್ಷಕರು,ಮದ್ದೂರು ವಲಯ, ಮದ್ದೂರು ಇವರ ಪ್ರ.ಮಾ.ವ ಸಂ:40/2007–08, ದಿನಾಂಕ:16.06.2008

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು,<br>ಮದ್ದೂರು ವಲಯ, ಮದ್ದೂರು | ಚನ್ನೇಗೌಡ ಬಿನ್ ರಾಮೇಗೌಡ,<br>22 ವರ್ಷ, ಹನಕೆರೆ ಗ್ರಾಮ, ಮಂಡ್ಯ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:16.06.2008 ರಂದು ಸಂಜೆ:05–30 ಗಂಟೆ ಸಮಯದಲ್ಲಿ ಮದ್ದೂರು ತಾಲ್ಲೂಕು, ಕಸಬಾ ಹೋಬಳಿ, ಬೆಂಗಳೂರು–ಮೈಸೂರು ಹೆದ್ದಾರಿಯಲ್ಲಿ ಸೋಮನಹಳ್ಳಿ ಗ್ರಾಮದ ಬಳಿ ಇರುವ ಮಲೈ ಮಹದೇಶ್ವರ ದೇವಸ್ಥಾನದ ಪಕ್ಕದಲ್ಲಿರುವ ಕಾಲೋನಿಗೆ ಹೋಗುವ ತಿರುವು ರಸ್ತೆಯಲ್ಲಿ ಅಕ್ರಮವಾಗಿ 17.280 ಲೀ ನಕಲಿ ಮದ್ಯವನ್ನು ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ:ಸಿಎನ್ಎನ್–6535 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 13(ಎಫ್), 14 ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32,34,38(ಎ),43 ಮತ್ತು 43 (ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ: 40/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಭಾರತದ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:02.02.2009 ರ ಪತ್ರದ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು, ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:17.02.2009 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಮಂಡ್ಯ ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಸಿಎನ್ಎನ್–6535 ಗೆ ಸಂಬಂಧಿಸಿದಂತೆ ಶ್ರೀ ಸಿ.ರಾಜೇಗೌಡ ಬಿನ್ ದಡಿಯಪ್ಪ ಅಲಿಯಾಸ್ ಬೋರಯ್ಯ, ಹನಕೆರೆ ಗ್ರಾಮ ಮತ್ತು ಅಂಚೆ, ಮಂಡ್ಯ ತಾಲ್ಲೂಕು, ಮಂಡ್ಯ ಜಿಲ್ಲೆ ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:17.02.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮತ್ತು ಅಬಕಾರಿ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರ ಮುಖಾಂತರ ಜಾರಿಮಾಡಲಾಗಿದೆ. ಇದುವರೆವಿಗೂ ಲಿಖಿತವಾಗಿ ಅಥವಾ ಖುದ್ದಾಗಿ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ: ಸಿಎನ್ಎನ್–6535 ವಾಹನದಲ್ಲಿ ದಿನಾಂಕ:16.06.2008 ರಂದು ಅಕ್ರಮವಾಗಿ ಮದ್ಯಸಾರ ಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತು ಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/241/2007–08, ದಿನಾಂಕ:13ನೇ ಮಾರ್ಚ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರ ಪ್ರ.ಮಾ.ವ ಸಂಖ್ಯೆ:40/2007–08, ದಿನಾಂಕ:16.06.2008 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ: ಸಿಎನ್‌ಎನ್–6535 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:13.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ

ಪಿ.ಆರ್.340 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/108/2008–09, ದಿನಾಂಕ:13ನೇ ಮಾರ್ಚ್, 2009**

ಅಬಕಾರಿ ಉಪ ನಿರೀಕ್ಷಕರು,ಮದ್ದೂರು ವಲಯ, ಮದ್ದೂರು ಇವರ ಪ್ರ.ಮಾ.ವ ಸಂ:08/2008–09, ದಿನಾಂಕ:21.10.2008.

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು,<br>ಮದ್ದೂರು ವಲಯ, ಮದ್ದೂರು | ತಲೆಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:21.10.2008 ರಂದು ರಾತ್ರಿ 08–30 ಗಂಟೆ ಸಮಯದಲ್ಲಿ ಮದ್ದೂರು ತಾಲ್ಲೂಕು, ಕೊಪ್ಪ ಹೋಬಳಿ, ಅರೆಕಲ್‌ದೊಡ್ಡಿ ಗ್ರಾಮದ ಬಳಿ, ಕಾಳಘಟ್ಟಕ್ಕೆ ಹೋಗುವ ರಸ್ತೆಯಲ್ಲಿ ಅಕ್ರಮವಾಗಿ 10.800 ಲೀ ಮದ್ಯವನ್ನು ಬಜಾಜ್‌ಚೇತಕ್ ಸ್ಕೂಟರ್ ಸಂಖ್ಯೆ:ಕೆಎ–11/ಹೆಚ್–9669 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 14 ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 38(ಎ) ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ: 08/2008–09 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:30.01.2009 ಮತ್ತು 06.02.2009 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು, ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:17.02.2009 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಮಂಡ್ಯ ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಕೆಎ–11/ಹೆಚ್–9669 ಗೆ ಸಂಬಂಧಿಸಿದಂತೆ ಶ್ರೀ ಚಂದ್ರಪ್ಪ ಬಿನ್ ಚನ್ನಪ್ಪ, ಮಾರಗೋಡನಹಳ್ಳಿ, ಮಂಡ್ಯ ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:17.02.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮತ್ತು ಅಬಕಾರಿ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರ ಮುಖಾಂತರ ಜಾರಿಮಾಡಲಾಗಿದೆ. ಇದುವರೆವಿಗೂ ಲಿಖಿತವಾಗಿ ಅಥವಾ ಖುದ್ದಾಗಿ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–11/ಹೆಚ್–9669 ವಾಹನದಲ್ಲಿ ದಿನಾಂಕ:21.10.2008 ರಂದು ಅಕ್ರಮವಾಗಿ ಮದ್ಯಸಾರ ಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತು ಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ,

ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/108/2008–09, ದಿನಾಂಕ:13ನೇ ಮಾರ್ಚ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರ ಪ್ರ.ಮಾ.ವ ಸಂಖ್ಯೆ:08/2008–09, ದಿನಾಂಕ:21.10.2008 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–11/ಹೆಚ್–9669 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:13.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.341        ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/81/2007–08, ದಿನಾಂಕ:20ನೇ ಮಾರ್ಚ್, 2009**

ಅಬಕಾರಿ ಉಪ ನಿರೀಕ್ಷಕರು, ನಂ–2, ಜಾರಿ ಮತ್ತು ತನಿಖೆ, ಮಳವಳ್ಳಿ ತಾಲ್ಲೂಕು ಇವರ ಪ್ರ.ಮಾ.ವ ಸಂ: 06/2007–08, ದಿನಾಂಕ:15.11.2007.

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು ನಂ–2, ಮಳವಳ್ಳಿ ವಲಯ, ಮಳವಳ್ಳಿ. | ಡಿ.ಎನ್.ಮಹೇಶ್ ಬಿನ್ ನಾಗರಾಜು, 30 ವರ್ಷ, ಒಕ್ಕಲಿಗರ ಜನಾಂಗ, ಪೆಟ್ಟಿ ಅಂಗಡಿ ವ್ಯಾಪಾರಿ, ದುಗ್ಗನಹಳ್ಳಿ, ಕಿರುಗಾವಲು ಹೋಬಳಿ, ಮಳವಳ್ಳಿ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:15.11.2007 ರಂದು ಮಧ್ಯಾಹ್ನ 3–00 ಗಂಟೆ ಸಮಯದಲ್ಲಿ ಮಳವಳ್ಳಿ ತಾಲ್ಲೂಕು, ಮಳವಳ್ಳಿ – ಹಿಟ್ಟನಹಳ್ಳಿ ಕೊಪ್ಪಲು ರಸ್ತೆಯ ಬಸವನಗುಡಿ ಬಸ್‌ನಿಲ್ದಾಣದ ಹತ್ತಿರ ಅಕ್ರಮವಾಗಿ 18.360 ಲೀ. ನಕಲಿ ಮದ್ಯವನ್ನು ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ: ಸಿಎಟಿ–8351 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 13 (ಎಫ್) ಮತ್ತು 14 ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 43 ಮತ್ತು 43 (ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ನಕಲಿ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ: 06/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಭಾರತದ ಮಾನಕ ಬ್ಯೂರೊಗೆ ಅನುಗುಣವಾಗಿರುವುದಿಲ್ಲ ಮತ್ತು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:10.12.2007 ಮತ್ತು 19.03.2009 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು, ನಕಲಿ ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:02.01.2008 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಬೆಂಗಳೂರು (ಸೆಂಟ್ರಲ್) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಸಿಎಟಿ–8351 ಗೆ ಸಂಬಂಧಿಸಿದಂತೆ ಶ್ರೀ ಕೆ.ಬಿಳಿಗಯ್ಯ ಬಿನ್ ಕೆಂಪಯ್ಯ, ಅಂಚೆ ಪೆಟ್ಟಿಗೆ ಸಂಖ್ಯೆ:7750, ಮಾಮೂಲ್‌ಪೇಟೆ, ಬೆಂಗಳೂರು–560053 ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:27.02.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮತ್ತು ಅಬಕಾರಿ ನಿರೀಕ್ಷಕರು, ಮಳವಳ್ಳಿ ವಲಯ, ಮಳವಳ್ಳಿ ಇವರ ಮುಖಾಂತರ ಜಾರಿ ಮಾಡಿಸಿದ್ದು, ನೊಂದಣಿ ಅಂಚೆ ಹಿಂತಿರುಗಿ ಬಂದಿರುತ್ತದೆ. ತನಿಖಾಧಿಕಾರಿಗಳು ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ವಾಸವಾಗಿರುವುದಿಲ್ಲವೆಂದು ತಿಳಿಸಿ ನೋಟೀಸ್‌ನ್ನು ಹಿಂತಿರುಗಿಸಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ: ಸಿಎಟಿ–8351 ವಾಹನದಲ್ಲಿ ದಿನಾಂಕ:15.11.2007 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತು ಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/81/2007–08, ದಿನಾಂಕ:20ನೇ ಮಾರ್ಚ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು,ನಂ–2, ಜಾರಿ ಮತ್ತು ತನಿಖೆ, ಮಳವಳ್ಳಿ ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ:06/2007–08, ದಿನಾಂಕ:15.11.2007 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ: ಸಿಎಟಿ–8351 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:20.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.342

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/37/2007–08, ದಿನಾಂಕ:13ನೇ ಮಾರ್ಚ್, 2009**

ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ನಾಗಮಂಗಲ ತಾಲ್ಲೂಕು ಇವರ ಪ್ರ.ಮಾ.ವ ಸಂ: 03/2007–08, ದಿನಾಂಕ:20.08.2007.

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು,<br>ಜಾರಿ ಮತ್ತು ತನಿಖೆ, ನಾಗಮಂಗಲ ತಾಲ್ಲೂಕು. | ತಲೆ ಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:20.08.2007 ರಂದು ರಾತ್ರಿ 10–45 ಗಂಟೆ ಸಮಯದಲ್ಲಿ ನಾಗಮಂಗಲ–ಮಂಡ್ಯ ಮುಖ್ಯರಸ್ತೆಯ ದೇವಲಾಪುರ ಹ್ಯಾಂಡ್ ಪೋಸ್ಟ್ ಹತ್ತಿರ ಅಕ್ರಮವಾಗಿ 5,054.400 ಲೀ ನಕಲಿ ಮದ್ಯ ವನ್ನು ಅಶೋಕ್ ಲೈಲ್ಯಾಂಡ್ ಲಾರಿ ನೊಂದಣಿ ಸಂಖ್ಯೆ: ಟಿಎನ್–09/ಎಕೆ–2849 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 14 ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32,34, 38(ಎ), ಮತ್ತು43 ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ನಕಲಿ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ:03/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ಹಾಗೂ ವಾಹನದ "ಬಿ" ವಹಿಯ ಪ್ರಕಾರ ಮೇಲ್ಕಂಡ ನೊಂದಣಿ ಸಂಖ್ಯೆಯು ಬಜಾಜ್ ಸಿಟಿ–100 ವಾಹನದ್ದಾಗಿದ್ದು ಲಾರಿಯ ಇಂಜಿನ್ ಸಂಖ್ಯೆ ಮತ್ತು ಚಾಸಿಸ್ ಸಂಖ್ಯೆ ಪರಿಶೀಲಿಸಲಾಗಿ ಇಂಜಿನ್ ಸಂಖ್ಯೆ:DEF329F1133642 ಮತ್ತು ಚಾಸಿಸ್ ಸಂಖ್ಯೆ: ALCO 1611 ALEL265075 AL310/129ALEL 761751671 ಎಂದು ನಮೂದಾಗಿದ್ದು, ವಾಹನವನ್ನು ಜಪ್ತು ಪಡಿಸಿದ ಸಮಯದಲ್ಲಿ ದೊರೆತ ದಾಖಲಾತಿಯಲ್ಲಿ ಚಾಸಿಸ್ ಸಂಖ್ಯೆ: LBE462346 ಮತ್ತು ಇಂಜಿನ್ ಸಂಖ್ಯೆ: LBE 341235 ಎಂದು ನಮೂದಾಗಿದ್ದು ವಾಹನದ ನೊಂದಣಿಯು ನಕಲಿ ಮತ್ತು ವಾಹನದ ಮಾಲೀಕತ್ವದ ಬಗ್ಗೆ ಖಚಿತವಾಗಿ ಕಂಡುಹಿಡಿಯಲು ಸಾಧ್ಯವಾಗದ ಕಾರಣ ವಾಹನ ಹಾಗೂ ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:04.09.2007 ಮತ್ತು 17.05.2008ರ ಪತ್ರಗಳ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು, ನಕಲಿ ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:22.10.2007 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಸ್ಟಾಟಿಸ್ಟಿಕ್ಸ್, ಚೆನ್ನೈ–05 ಇವರಿಗೆ ಪತ್ರ ಬರೆಯಲಾಗಿ ತನಿಖಾಧಿಕಾರಿಗಳು ಸಲ್ಲಿಸಿರುವ ವರದಿಯಲ್ಲಿ ಸತ್ಯಾಂಶವಿರುವುದು ಕಂಡು ಬಂದಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಅಶೋಕ್ ಲೈಲ್ಯಾಂಡ್ ಲಾರಿ ನಕಲಿ ನೊಂದಣಿ ಸಂಖ್ಯೆ: ಟಿಎನ್–09/ಎಕೆ–2849 ವಾಹನದಲ್ಲಿ ದಿನಾಂಕ:20.08.2007 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಹಾಗೂ ಇಂತಹ ಘೋರ ಕೃತ್ಯಕ್ಕಾಗಿಯೇ ಬಳಸಲು ವಾಹನದ ನೊಂದಣಿ ಸಂಖ್ಯೆಯನ್ನು ಬದಲಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಅಲ್ಲದೇ ಜಪ್ತು ಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/37/2007–08, ದಿನಾಂಕ:13ನೇ ಮಾರ್ಚ್, 2009**

ಡಾಃ ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ನಾಗಮಂಗಲ ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ: 03/2007–08, ದಿನಾಂಕ:20.08.2007 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಅಶೋಕ್ ಲೈಲ್ಯಾಂಡ್ ಲಾರಿ ನಕಲಿ ನೊಂದಣಿ ಸಂ: ಟಿಎನ್–09/ ಎಕೆ–2849 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:13.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸ ಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.343  ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/200/2007–08, ದಿನಾಂಕ:3ನೇ ಮಾರ್ಚ್, 2009**

ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ನಾಗಮಂಗಲ ತಾಲ್ಲೂಕು ಇವರ ಪ್ರ.ಮಾ.ವ ಸಂ: 15/2007–08, ದಿನಾಂಕ:03.05.2008.

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು,<br>ಜಾರಿ ಮತ್ತು ತನಿಖೆ, ನಾಗಮಂಗಲ ತಾಲ್ಲೂಕು | ನಿಂಗರಾಜು ಬಿನ್ ಚನ್ನೇಗೌಡ,<br>ವಯಸ್ಸು 30, ಒಕ್ಕಲಿಗ ಜನಾಂಗ, ಕೆಲೆಗೆರೆ ಗ್ರಾಮ, ಕಸಬಾ ಹೋಬಳಿ, ನಾಗಮಂಗಲ ತಾಲ್ಲೂಕು |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:03.05.2008 ರಂದು ಮಧ್ಯರಾತ್ರಿ 1–30 ಗಂಟೆ ಸಮಯದಲ್ಲಿ ನಾಗಮಂಗಲ ತಾಲ್ಲೂಕು ಹುಲಿಕೆರೆ ಗ್ರಾಮದ ಆದಿಚುಂಚನಗಿರಿ ಪ್ರೌಢಶಾಲೆ ಗೇಟ್ ಬಳಿ ಅಕ್ರಮವಾಗಿ 17.280 ಲೀ ನಕಲಿ ಮದ್ಯವನ್ನು ಬಜಾಜ್ ಪ್ಲಾಟಿನ (ನೊಂದಣಿ ಸಂಖ್ಯೆ ಇರುವುದಿಲ್ಲ) ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 14 ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32,34, 38(ಎ), ಮತ್ತು43 ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ನಕಲಿ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ:15/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಭಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ

ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:19.05.2008 ಮತ್ತು 24.10.2008 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು, ನಕಲಿ ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:10.06.2008ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಅರ್ಪಿತ ಆಟೋ ಮೊಬೈಲ್ಸ್ ಕಂಪನಿ, ಹಾಸನ ಇವರು ದಿನಾಂಕ:07.12.2006 ರಂದು ನೀಡಿರುವ ಸೇಲ್ ಸರ್ಟಿಫಿಕೆಟ್ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾಸನ ಇವರು ನೀಡಿರುವ ತಾತ್ಕಾಲಿಕ ನೊಂದಣಿ ಪತ್ರದ (ತಾತ್ಕಾಲಿಕ ನೊಂದಣಿ ಸಂಖ್ಯೆ:ಕೆಎ–13/ಟಿಆರ್–2473) ಪರಿಶೀಲನೆಯಿಂದ ಪ್ರಕರಣದಲ್ಲಿ ಜಪ್ತು ಪಡಿಸಿರುವ ಬಜಾಜ್ ಪ್ಲಾಟಿನ ವಾಹನದ ಮಾಲೀಕರು ಪ್ರಕರಣದ ಆರೋಪಿಯಾದ ಕೆ.ಸಿ.ನಿಂಗರಾಜು ಬಿನ್ ಚನ್ನೇಗೌಡ, ಮಲ್ಲಾಳಹಳ್ಳಿ ಪೋಸ್ಟ್, ಕೆಲೆಗೆರೆ ಗ್ರಾಮ, ಕಸಬಾ ಹೋಬಳಿ, ನಾಗಮಂಗಲ ತಾಲ್ಲೂಕು ಇವರೆಂದು ತಿಳಿದಿದ್ದು, ಸದರಿಯವರಿಗೆ ದಿನಾಂಕ:01.12.2008 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮೂಲಕ ಹಾಗೂ ಮತ್ತು ಅಬಕಾರಿ ನಿರೀಕ್ಷಕರು, ನಾಗಮಂಗಲ ವಲಯ ಇವರ ಮೂಲಕ ಜಾರಿ ಮಾಡಲಾಗಿದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಪ್ಲಾಟಿನ ತಾತ್ಕಾಲಿಕ ನೊಂದಣಿ ಸಂಖ್ಯೆ: ಕೆಎ–13/ಟಿಆರ್–2473 ವಾಹನದಲ್ಲಿ ದಿನಾಂಕ:03.05.2008 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಹಾಗೂ ಇಂತಹ ಘೋರ ಕೃತ್ಯಕ್ಕಾಗಿಯೇ ಬಳಸುವ ಉದ್ದೇಶದಿಂದ ವಾಹನ ಖರೀದಿಸಿದ ದಿನಾಂಕ:07.12.2006 ರಿಂದ ಮೊಕದ್ದಮೆ ದಾಖಲಾದ ದಿನಾಂಕ:03.05.2008 ರವರೆಗೆ ಅಂದರೆ ಸುಮಾರು 1 ವರ್ಷ 6 ತಿಂಗಳು ವಾಹನದ ನೊಂದಣಿಯನ್ನು ಮಾಡಿಸದೇ ಬಳಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಅಲ್ಲದೇ ಜಪ್ತು ಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/200/2007–08, ದಿನಾಂಕ:3ನೇ ಮಾರ್ಚ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ನಾಗಮಂಗಲ ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ: 15/2007–08, ದಿನಾಂಕ:03.05.2008ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಬಜಾಜ್ ಪ್ಲಾಟಿನ ತಾತ್ಕಾಲಿಕ ನೊಂದಣಿ ಸಂ:ಕೆಎ–13/ಟಿಆರ್–2473 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:03.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.344

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/106/2007–08, ದಿನಾಂಕ:26ನೇ ಮಾರ್ಚ್, 2009**

ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮದ್ದೂರು ತಾಲ್ಲೂಕು ಇವರ ಪ್ರ.ಮಾ.ವ ಸಂ: 16/2007–08, ದಿನಾಂಕ:30.01.2008.

| ಪಿರ್ಯಾದುದಾರರು | ಆರೋಪಿ |
|---|---|
| ಅಬಕಾರಿ ಉಪ ನಿರೀಕ್ಷಕರು,<br>ಜಾರಿ ಮತ್ತು ತನಿಖೆ, ಮದ್ದೂರು ತಾಲ್ಲೂಕು | 1) ಕೆ.ಪಿ.ಸತೀಶ್ ಬಿನ್ ಪಾಪಣ್ಣ, 23 ವರ್ಷ, ಒಕ್ಕಲಿಗ ಜನಾಂಗ, ಕೋಣಸಾಲೆ ಗ್ರಾಮ, ಮದ್ದೂರು ತಾಲ್ಲೂಕು<br>2)ನಂದೀಶ್ ಬಿನ್ ಬಸವರಾಜು, 25 ವರ್ಷ, ಒಕ್ಕಲಿಗ ಜನಾಂಗ, ಸೊಳ್ಳೇಪುರ ಗ್ರಾಮ, ಮದ್ದೂರು ತಾಲ್ಲೂಕು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:30.01.2008 ರಂದು ಬೆಳಗ್ಗಿನ ಜಾವ 3–00 ಗಂಟೆ ಸಮಯದಲ್ಲಿ ಮದ್ದೂರು ತಾಲ್ಲೂಕು, ಕೊಪ್ಪ ಹೋಬಳಿ, ಕೋಣಸಾಲೆ ಗ್ರಾಮದ ವಿಶ್ವೇಶ್ವರಯ್ಯ ಸರ್ಕಲ್ ದಕ್ಷಿಣ ರಸ್ತೆಯಲ್ಲಿರುವ ಮೊದಲನೇ ಆರೋಪಿಗೆ ಸೇರಿದ ಹಳೆ ಗುಡಿಸಲಿನಲ್ಲಿ ಅಕ್ರಮವಾಗಿ 34.560 ಲೀ ನಕಲಿ ಮದ್ಯ, ಸುಮಾರು 10.000 ಲೀ ಮದ್ಯಸಾರ, ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ಇತರೆ ಅಬಕಾರಿ ವಸ್ತುಗಳನ್ನು ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ–02/ಕ್ಯೂ–6283 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 13 ಮತ್ತು 14ರ ರೀತ್ಯಾ ಅಪರಾಧ ವಾಗಿದ್ದು, ಇದೇ ಕಾಯ್ದೆಯ ಕಲಂ 32, 38(ಎ), 43 ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ, ನಕಲಿ ಮದ್ಯ, ಮದ್ಯಸಾರ ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ಇತರೆ ವಸ್ತುಗಳನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ:16/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಭಾರತದ ಮಾನಕ ಬ್ಯೂರೊಗೆ ಅನುಗುಣವಾಗಿರುವುದಿಲ್ಲ ಮತ್ತು ನಕಲಿ ಮದ್ಯವಾಗಿರುತ್ತವೆ, ಹಾಗೂ ಮದ್ಯಸಾರದಲ್ಲಿ ಈಥೈಲ್ ಅಲ್ಕೋಹಾಲ್ ಕಂಡುಬಂದಿದ್ದು ಅದು ಮಾನವನ ಸೇವನೆಗೆ ಬಳಸಬಹುದಾದ ಮದ್ಯವನ್ನು ತಯಾರಿಸಲು ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ವಾಹನ, ನಕಲಿ ಮದ್ಯ, ಮದ್ಯಸಾರ ಹಾಗೂ ಇತರೆ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:19.02.2008, 21.04.2008 ಮತ್ತು 22.08.2008 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು, ನಕಲಿ ಮದ್ಯ, ಮದ್ಯಸಾರ ಮತ್ತು ಇತರೆ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:01.03.2008 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಬೆಂಗಳೂರು (ಪಶ್ಚಿಮ) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ನೊಂದಣಿ ಸಂಖ್ಯೆ: ಕೆಎ–02/ಕ್ಯೂ–6283 ಗೆ ಸಂಬಂಧಿಸಿದಂತೆ ಶ್ರೀ ಎಂ.ವಿ.ವೆಂಕಟೇಶ್ ಬಿನ್ ಈರಯ್ಯ, ನಂ.294, 4ನೇ ಮೈನ್, 1ನೇ ಹಂತ, ಮಂಜುನಾಥನಗರ, ಬೆಂಗಳೂರು–10 ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:22.07.2008, 08.09.2008 ಹಾಗೂ 16.03.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮತ್ತು ಅಬಕಾರಿ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರ ಮುಖಾಂತರ ಜಾರಿ ಮಾಡಿಸಲಾಗಿದ್ದು, ನೊಂದಣಿ ಅಂಚೆ ಹಿಂತಿರುಗಿ ಬಂದಿರುತ್ತದೆ. ತನಿಖಾಧಿಕಾರಿಗಳು ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ವಾಸವಾಗಿರುವುದಿಲ್ಲವೆಂದು ತಿಳಿಸಿ ನೋಟೀಸ್‌ನ್ನು ಹಿಂತಿರುಗಿಸಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ–02/ಕ್ಯೂ–6283 ವಾಹನದಲ್ಲಿ ದಿನಾಂಕ:30.01.2008 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತು ಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/106/2007–08, ದಿನಾಂಕ:26ನೇ ಮಾರ್ಚ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮದ್ದೂರು ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ:16/2007–08, ದಿನಾಂಕ:30.01.2008 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ:ಕೆಎ–02/ಕ್ಯೂ–6283 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:26.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.317

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/227/2007–08, ದಿನಾಂಕ:26ನೇ ಮಾರ್ಚ್, 2009**

ಆರಕ್ಷಕ ಉಪ ನಿರೀಕ್ಷಕರು, ಟೌನ್ ಪೋಲೀಸ್ ಠಾಣೆ, ಕೆ.ಆರ್.ಪೇಟೆ ಇವರ ಮೊಕದ್ದಮೆ ಸಂಖ್ಯೆ: 82/2008, ದಿನಾಂಕ:27.04.2008.

| **ಪಿರ್ಯಾದುದಾರರು** | **ಆರೋಪಿಗಳು** |
|---|---|
| ಆರಕ್ಷಕ ಉಪ ನಿರೀಕ್ಷಕರು,<br>ಟೌನ್ ಪೋಲೀಸ್ ಠಾಣೆ,<br>ಕೆ.ಆರ್.ಪೇಟೆ. | 1) ಮಧು ಬಿನ್ ಹನುಮಂತಪ್ಪ, ಅಗಹಾರ, ಕೆ.ಆರ್.ಪೇಟೆ ಟೌನ್<br>2) ಗಣೇಶ್ (ಉ) ಪ್ರದೀಪ್ ಬಿನ್ ದೇವರಾಜು, ಅಗಹಾರ, ಕೆ.ಆರ್.ಪೇಟೆ ಟೌನ್.<br>3) ಉಮೇಶ ಬಿನ್ ರಾಮಣ್ಣ, ಅಗಹಾರ, ಕೆ.ಆರ್.ಪೇಟೆ ಟೌನ್<br>4) ರಾಜ ಬಿನ್ ರಾಮಯ್ಯ, ಅಗಹಾರ, ಕೆ.ಆರ್.ಪೇಟೆ ಟೌನ್<br>5) ಅರುಣ್ (ಉ) ಮಂಜು ಬಿನ್ ಹನುಮಂತಪ್ಪ, ಅಗ್ರಹಾರ, ಕೆ.ಆರ್.ಪೇಟೆ ಟೌನ್<br>6) ರಮೇಶ ಬಿನ್ ನಂಜುಂಡಶೆಟ್ಟಿ, ಅಕ್ಕಿಹೆಬ್ಬಾಳು ಗ್ರಾಮ, ಕೆ.ಆರ್.ಪೇಟೆ ತಾಲ್ಲೂಕು<br>7) ಕುಮಾರ ಬಿನ್ ದೇವರಾಜೇಗೌಡ, ಅಗಹಾರ, ಕೆ.ಅರ್.ಪೇಟೆ ಟೌನ್. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:26.04.2008 ರಂದು ರಾತ್ರಿ 12–00 ಗಂಟೆ ಸಮಯದಲ್ಲಿ ಕೆ.ಆರ್.ಪೇಟೆ ಟೌನ್‌ನ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ಹಿಂಭಾಗದ ಹೊಸಹೊಳಲು ಗ್ರಾಮದ ರಾಮಣ್ಣ ಬಿನ್ ಉಗ್ರಯ್ಯ ಇವರಿಗೆ ಸೇರಿದ ತೋಟದ ಮನೆ ಸರ್ವೆ ನಂ.117 ರಲ್ಲಿ ಅಕ್ರಮವಾಗಿ 876.720 ಲೀ ನಕಲಿ ಮದ್ಯ, ಕೆರಾಮಲ್, ಕಾರ್ಕ್ಸ್‌ಗಳು, ಖಾಲಿ ಬಾಟಲುಗಳು, ಅಡಿಸಿವ್ ಲೇಬಲ್‌ಗಳು, ಬಾಟಲಿಗೆ ಅಂಟಿಸುವ ಲೇಬಲ್‌ಗಳು ಹಾಗೂ ಇತರೆ ನಕಲಿ ಮದ್ಯ ತಯಾರಿಸುವ ವಸ್ತುಗಳನ್ನು ಶ್ರೀ ರಕ್ಷಾ ಅಂಬುಲೆನ್ಸ್ ಹೆಸರಿನ ಟೆಂಪೋ ಟ್ರಾವಲರ್ ನೊಂದಣಿ ಸಂಖ್ಯೆ:ಕೆಎ–01/ಎ–6028 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 14 ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 34 ರ ರೀತ್ಯಾ ಶಿಕ್ಷಾರ್ಹ ವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂ: 82/2008 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಿದ ಶ್ರೀ ರಕ್ಷಾ ಅಂಬುಲೆನ್ಸ್ ಹೆಸರಿನ ಟೆಂಪೋ ಟ್ರಾವಲರ್ ನೊಂದಣಿ ಸಂಖ್ಯೆ: ಕೆಎ–01/ಎ–6028 ವಾಹನದ ತಾತ್ಕಾಲಿಕ ಬಿಡುಗಡೆ ಕೋರಿ ಶ್ರೀ ಪೀಟರ್ ಜೋಸೆಫ್ ಬಿನ್ ರಾಜ, 30 ವರ್ಷ, ಮನೆ ನಂ.161, ಚನ್ನಸಂದ್ರ ಲೇ ಔಟ್, ಆರ್.ಆರ್. ನಗರ, ಬೆಂಗಳೂರು–60 ಇವರ ಜಿ.ಪಿ.ಎ ಹೋಲ್ಡರ್ ಎನ್ನಲಾದ ಶ್ರೀ ವೆಂಕಟೇಶ ಬಿನ್ ಅಂಜನಪ್ಪ, ಜೆಟ್ಟಿಪಾಳ್ಯ, ಚನ್ನೇನಹಳ್ಳಿ, ಮಾಗಡಿ ಮುಖ್ಯ ರಸ್ತೆ, ಬೆಂಗಳೂರು–30 ಇವರು ಮೇಲ್ಕಂಡ ವಾಹನದ ಆರ್.ಸಿ ಪುಸ್ತಕದ ನಕಲು ಪ್ರತಿ ಹಾಗೂ ಇತರೆ ದಾಖಲಾತಿಗಳೊಡನೆ ದಿನಾಂಕ:03.06.2008 ರಂದು ಅವರ ವಕೀಲರ ಮೂಲಕ ಅರ್ಜಿ ಸಲ್ಲಿಸಿದ್ದರು.

ಸದರಿ ಅರ್ಜಿ ಹಾಗೂ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಾಧಿಕಾರದ ಆದೇಶ ಸಂಖ್ಯೆ:ಡಿಟಿಸಿಆರ್ ಸಂಖ್ಯೆ:227/2007–08, ದಿನಾಂಕ:10.06.2008 ರಲ್ಲಿ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನವನ್ನು ಅರ್ಜಿದಾರರ ಮಧ್ಯಂತರ ವಶಕ್ಕೆ ನೀಡಿದ್ದಲ್ಲಿ ಜನರ ಜೀವ ರಕ್ಷಣೆಗೆ ಉಪಯೋಗಿಸುವ ಬದಲು ಪುನಃ ಇಂತಹುದೇ ಅಪರಾಧಕ್ಕೆ ಬಳಸುವ, ವರ್ಗಾವಣೆ ಮಾಡುವ ಹಾಗೂ ಅದರ ಬಣ್ಣ, ರಚನೆ, ವಗೈರೆ ಬದಲಾಯಿಸುವ ಸಾಧ್ಯತೆ ಇರುವುದರಿಂದ ಅರ್ಜಿದಾರರ ಮನವಿಯನ್ನು ತಿರಸ್ಕರಿಸಲಾಗಿತ್ತು. ಹಾಗೂ ಸದರಿ ಆದೇಶವನ್ನು ಶ್ರೀ ಪೀಟರ್ ಜೋಸೆಫ್ ಬಿನ್ ರಾಜ, ಮನೆ ನಂ.161, ಚನ್ನಸಂದ್ರ ಲೇ ಔಟ್, ಆರ್.ಆರ್.ನಗರ, ಬೆಂಗಳೂರು–60 ಇವರಿಗೆ ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆಯು ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ಲಭ್ಯವಿಲ್ಲದೇ ಇರುವುದರಿಂದ ಹಿಂತಿರುಗಿ ಬಂದಿರುತ್ತದೆ.

ತದನಂತರದಲ್ಲಿ ವಾಹನದ ಮಾಲೀಕರ ಜಿ.ಪಿ.ಎ ಹೋಲ್ಡರ್ ಎನ್ನಲಾದ ಶ್ರೀ ವೆಂಕಟೇಶ್ ಬಿನ್ ಅಂಜನಪ್ಪ ಇವರು ಈ ಪ್ರಾಧಿಕಾರದ ದಿನಾಂಕ:10.06.2008ರ ಆದೇಶದ ವಿರುದ್ಧ ಮಾನ್ಯ ಫಾಸ್ಟ್ ಟ್ರ್ಯಾಕ್ ಕೋರ್ಟ್–ನಂ.4, ಮಂಡ್ಯ ಇಲ್ಲಿ ಕ್ರಿಮಿನಲ್ ಅಪೀಲ್ ಸಂಖ್ಯೆ: 59/2008ನ್ನು ದಾಖಲಿಸಿದ್ದು, ಮಾನ್ಯ ಫಾಸ್ಟ್ ಟ್ರ್ಯಾಕ್ ನ್ಯಾಯಾಲಯದ ದಿನಾಂಕ:04.07.2008ರ

ಆದೇಶದಲ್ಲಿ ಪ್ರಕರಣದಲ್ಲಿ ಜಪ್ತಾದ ವಾಹನವು ಅಂಬುಲೆನ್ಸ್ ಸೇವೆಯಲ್ಲಿ ನೊಂದಾ ಯಿಸದೇ ಇರುವ ಬಗ್ಗೆ ಪೂರಕ ದಾಖಲಾತಿಗಳನ್ನು ಹಾಜರು ಪಡಿಸದೇ ಇರುವ ಹಿನ್ನೆಲೆ ಯಲ್ಲಿ ಹಾಗೂ ಅಂಬುಲೆನ್ಸ್ ವಾಹನವನ್ನು ಜನರ ಜೀವರಕ್ಷಣೆಗೆ ಉಪಯೋಗಿಸುವ ಬದಲು ಅಕ್ರಮ ನಕಲಿ ಮದ್ಯವನ್ನು ಸಾಗಾಣಿಕೆ ಮಾಡಲು ಉಪಯೋಗಿಸುತ್ತಿದ್ದುದನ್ನು ಪ್ರಸ್ತಾಪಿಸಿ, ವಾಹನವನ್ನು ತಾತ್ಕಾಲಿಕ ಬಿಡುಗಡೆ ಮಾಡಿದ್ದಲ್ಲಿ ಮತ್ತೆ ಇಂತಹುದೇ ಅಕ್ರಮ ಚಟುವಟಿಕೆಗಳಿಗೆ ಬಳಸುವ ಹಾಗೂ ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆ ಇರುವುದರಿಂದ ಈ ಪ್ರಾಧಿಕಾರದ ದಿನಾಂಕ:10.06.2008 ರ ಆದೇಶವನ್ನು ದೃಡಪಡಿಸಿರುತ್ತಾರೆ. ಹಾಗೂ ಅರ್ಜಿದಾರರ ಮೇಲ್ಮನವಿಯನ್ನು ವಜಾಗೊಳಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನ, ನಕಲಿ ಮದ್ಯ ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:23.03.2009 ರ ಪತ್ರದ ಮೂಲಕ ಕೋರಿರುತ್ತಾರೆ.

ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಜ್ಞಾನಭಾರತಿ, ಮೈಸೂರು ರಸ್ತೆ, ಬೆಂಗಳೂರು–5600059 ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಕೆಎ–01/ಎ–6028ಗೆ ಸಂಬಂಧಿಸಿದಂತೆ ಶ್ರೀ ಪೀಟರ್ ಜೋಸೆಫ್ ಬಿನ್ ರಾಜ, ಮನೆ ನಂ.161, ಚನ್ನಸಂದ್ರ ಲೇ ಔಟ್, ಆರ್.ಆರ್.ನಗರ, ಬೆಂಗಳೂರು –60 ಇವರು ವಾಹನದ ಮಾಲೀಕರೆಂದು ತಿಳಿದಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಶ್ರೀ ರಕ್ಷಾ ಅಂಬುಲೆನ್ಸ್ ಹೆಸರಿನ ಟೆಂಪೋ ಟ್ರಾವಲರ್ ನೊಂದಣಿ ಸಂಖ್ಯೆ:ಕೆಎ–01/ಎ–6028 ವಾಹನದಲ್ಲಿ ದಿನಾಂಕ:26.04.2008 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳಾದ ಕೆರಾಮಲ್, ಖಾಲಿ ಬಾಟಲುಗಳು, ಕಾರ್ಕ್ಸ್‌ಗಳು, ಅಡಿಸಿವ್ ಲೇಬಲ್‌ಗಳು, ಬಾಟಲಿಗೆ ಅಂಟಿಸುವ ಲೇಬಲ್‌ಗಳು ಹಾಗೂ ಇತರೆ ವಸ್ತುಗಳನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗ ಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನ, ನಕಲಿ ಮದ್ಯ, ಮತ್ತು ನಕಲಿ ಮದ್ಯ ತಯಾರಿಸಲು ಬಳಸುವ ಇತರೇ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/227/2007–08, ದಿನಾಂಕ:26ನೇ ಮಾರ್ಚ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಟೌನ್ ಪೋಲೀಸ್ ಠಾಣೆ, ಕೆ.ಆರ್.ಪೇಟೆ ಇವರ ಪ್ರ.ಮಾ.ವ ಸಂಖ್ಯೆ:82/2008, ದಿನಾಂಕ:27.04.2008ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಶ್ರೀ ರಕ್ಷಾ ಅಂಬುಲೆನ್ಸ್ ಹೆಸರಿನ ಟೆಂಪೋ ಟ್ರಾವಲರ್ ನೊಂದಣಿ ಸಂಖ್ಯೆ: ಕೆಎ–01/ಎ–6028 ವಾಹನ, 876.720 ಲೀ ನಕಲಿ ಮದ್ಯ (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಖಾಲಿ ಬಾಟಲುಗಳನ್ನು ಹಾಗೂ ಇತರೆ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:26.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.318

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/176/2007–08, ದಿನಾಂಕ:30ನೇ ಮಾರ್ಚ್, 2009**

ಅಬಕಾರಿ ಉಪ ನಿರೀಕ್ಷಕರು–ನಂ.2,ಕೆ.ಆರ್.ಪೇಟೆ ವಲಯ, ಕೆ.ಆರ್. ಪೇಟೆ ಇವರ ಪ್ರ.ಮಾ.ವ ಸಂಖ್ಯೆ: 03/2007–08, ದಿನಾಂಕ:25.04.2008.

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು– ನಂ.2<br>ಕೆ.ಆರ್.ಪೇಟೆ ವಲಯ, ಕೆ.ಆರ್.ಪೇಟೆ. | ತಲೆ ಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:25.04.2008 ರಂದು ರಾತ್ರಿ 08–00 ಗಂಟೆ ಸಮಯದಲ್ಲಿ ಕೆ.ಆರ್.ಪೇಟೆ ತಾಲ್ಲೂಕಿನ ಅಶೋಕನಗರ–ಬೂಕನಕೆರೆಗೆ ಹೋಗುವ ಮಧ್ಯಭಾಗದಲ್ಲಿರುವ ಸರ್ಕಲ್‌ನಲ್ಲಿ ಅಕ್ರಮವಾಗಿ 5.400 ಲೀ ಮದ್ಯವನ್ನು ಬಜಾಜ್ ಚೇತಕ್

ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ-11/ಇ-9463 ವಾಹನ ದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 14 ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 34, 38(ಎ) ಮತ್ತು 43ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂ:03/2007-08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:23.03.2009ರ ಪತ್ರದ ಮೂಲಕ ಕೋರಿರುತ್ತಾರೆ.

ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಕೆಎ-11/ಇ-9463 ಗೆ ಸಂಬಂಧಿಸಿದಂತೆ ಶ್ರೀ ಸಿ.ಎಲ್.ಗುರುರಾಜ್ ಬಿನ್ ಲಿಂಗೇಗೌಡ, ಚಿಂದಗಿರಿಕೊಪ್ಪಲು, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:16-03-2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ಹಾಗೂ ಅಬಕಾರಿ ನಿರೀಕ್ಷಕರು, ಕೆ.ಆರ್.ಪೇಟೆ ವಲಯ ಇವರ ಮುಖಾಂತರ ಜಾರಿ ಮಾಡಿಸಲಾಗಿದೆ. ಇದುವರೆವಿಗೂ ಲಿಖಿತವಾಗಿ ಅಥವಾ ಖುದ್ದಾಗಿ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ-11/ಇ-9463 ವಾಹನದಲ್ಲಿ ದಿನಾಂಕ:25.04.2008 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತು ಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನ ಮತ್ತು ಮದ್ಯವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/176/2007-08, ದಿನಾಂಕ:30ನೇ ಮಾರ್ಚ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು-ನಂ.2, ಕೆ.ಆರ್.ಪೇಟೆ ವಲಯ, ಕೆ.ಆರ್.ಪೇಟೆ ಇವರ ಪ್ರ.ಮಾ.ವ ಸಂಖ್ಯೆ:03/2007-08, ದಿನಾಂಕ:25.04.2008ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ-11/ಇ-9463 ವಾಹನ, 5.400 ಲೀ. ಮದ್ಯವನ್ನು (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಹಾಗೂ ಇತರೆ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:30.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸ ಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ

ಪಿ.ಆರ್.319 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**

**ಡಿಟಿಸಿಆರ್/78/2008-09, ದಿನಾಂಕ:25ನೇ ಮಾರ್ಚ್, 2009**

ಅಬಕಾರಿ ಉಪ ನಿರೀಕ್ಷಕರು,ಕೆ.ಆರ್.ಪೇಟೆ ವಲಯ, ಕೆ.ಆರ್.ಪೇಟೆ ಇವರ ಪ್ರ.ಮಾ.ವ ಸಂಖ್ಯೆ:07/2007-08, ದಿನಾಂಕ:28.04.2008.

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು,<br>ಕೆ.ಆರ್.ಪೇಟೆ ವಲಯ, ಕೆ.ಆರ್.ಪೇಟೆ. | ತಲೆ ಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:28.04.2008 ರಂದು ರಾತ್ರಿ 7–30 ಗಂಟೆ ಸಮಯದಲ್ಲಿ ಕೆ.ಆರ್.ಪೇಟೆ ತಾಲ್ಲೂಕಿನ ಗಾಣದಹಳ್ಳಿ–ಮಾದಪುರ ರಸ್ತೆಯಲ್ಲಿ ಅಕ್ರಮವಾಗಿ 5.580 ಲೀ ಮದ್ಯವನ್ನು ಹೀರೋ ಹೋಂಡಾ ನೊಂದಣಿ ಸಂಖ್ಯೆ:ಕೆಎ–06/ಹೆಚ್–3546 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದು ದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 14 ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 34, 38(ಎ) ಮತ್ತು43 ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂ: 07/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:23.03.2009 ರ ಪತ್ರದ ಮೂಲಕ ಕೋರಿರುತ್ತಾರೆ.

ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ತುಮಕೂರು ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಕೆಎ–06/ಹೆಚ್–3546ಗೆ ಸಂಬಂಧಿಸಿದಂತೆ ಶ್ರೀ ಪರಶನಾಥ ಕೋ ಆಪರೇಟಿವ್ ಸೊಸೈಟಿ, ತುಮಕೂರು ಜಿಲ್ಲೆ, ತುಮಕೂರು ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:18.02.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ಕಾರಣ ಕೇಳುವ ನೋಟೀಸ್ ಮೇಲ್ಕಂಡ ವಿಳಾಸದಲ್ಲಿ ಸ್ವೀಕೃತಿಯಾಗಿದ್ದು, ಇದುವರೆವಿಗೂ ಲಿಖಿತವಾಗಿ ಅಥವಾ ಖುದ್ದಾಗಿ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಹೀರೋ ಹೋಂಡಾ ಸಂಖ್ಯೆ: ಕೆಎ–06/ಹೆಚ್–3546 ವಾಹನದಲ್ಲಿ ದಿನಾಂಕ:28.04.2008 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತು ಪಡಿಸಿರುವ ವಾಹನ ವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆ ಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನ ಮತ್ತು ಮದ್ಯವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/78/2008–09, ದಿನಾಂಕ:25ನೇ ಮಾರ್ಚ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಕೆ.ಆರ್.ಪೇಟೆ ವಲಯ, ಕೆ.ಆರ್.ಪೇಟೆ ಇವರ ಪ್ರ.ಮಾ.ವ ಸಂಖ್ಯೆ:07/2007–08, ದಿನಾಂಕ:28.04.2008 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಹೀರೋ ಹೋಂಡಾ ನೊಂದಣಿ ಸಂಖ್ಯೆ: ಕೆಎ–06/ಹೆಚ್–3546 ವಾಹನ ಮತ್ತು 5.580 ಲೀ. ಮದ್ಯವನ್ನು (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:25.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.320

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/176/2008–09, ದಿನಾಂಕ:30ನೇ ಮಾರ್ಚ್, 2009**

ಅಬಕಾರಿ ಉಪ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರ ಪ್ರ.ಮಾ.ವ ಸಂಖ್ಯೆ:17/2008–09, ದಿನಾಂಕ:16.01.2009.

| ಫಿರ್ಯಾದುದಾರರು | ಆರೋಪಿ |
|---|---|
| ಅಬಕಾರಿ ಉಪ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು. | ಸಿ.ಎಸ್.ಕುಮಾರ್ ಬಿನ್ ಲಿಂಗೇಗೌಡ (ಉ) ಕಳಾರೀಗೌಡ, 19 ವರ್ಷ, ಒಕ್ಕಲಿಗರ ಜನಾಂಗ, ತೊರೆಚಾಕನಹಳ್ಳಿ ಗ್ರಾಮ, ಸಿ.ಎ.ಕೆರೆ ಹೋಬಳಿ, ಮದ್ದೂರು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:16.01.2009 ರಂದು ಮಧ್ಯಾಹ್ನ 1–00 ಗಂಟೆ ಸಮಯದಲ್ಲಿ ಮದ್ದೂರು ತಾಲ್ಲೂಕಿನ ಸಿ.ಎ.ಕೆರೆ ಹೋಬಳಿ ತೊರೆಚಾಕನಹಳ್ಳಿ ಗ್ರಾಮದಿಂದ ಕೆ.ಬೆಳ್ಳೂರು ಗ್ರಾಮಕ್ಕೆ ಹೋಗುವ ರಸ್ತೆಯಲ್ಲಿ ಅಕ್ರಮವಾಗಿ 17.280 ಲೀ ನಕಲಿ ಮದ್ಯವನ್ನು ಟಿ.ವಿ.ಎಸ್ ಚಾಂಪ್ ಮೊಪೆಡ್ ನೊಂದಣಿ ಸಂಖ್ಯೆ: ಕೆಎ–05/ವಿ–2876 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 13(ಎಫ್) ಮತ್ತು 14 ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 38(ಎ) ಮತ್ತು 43 ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಮತ್ತು ನಕಲಿ ಮದ್ಯವನ್ನು ಪಂಚನಾಮೆ ಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ:17/2008–09 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವುಗಳು ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ಸ್ ನಿಗದಿಪಡಿಸಿರುವ ಮಾದರಿ ಗುಣಲಕ್ಷಣಗಳಿಗೆ ಅನುಗುಣವಾಗಿಲ್ಲದಿರುವುದರಿಂದ ಅವು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ವಾಹನ ಮತ್ತು ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:13.03.2009 ರ ಪತ್ರದ ಮೂಲಕ ಕೋರಿರುತ್ತಾರೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಬೆಂಗಳೂರು (ದಕ್ಷಿಣ) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ನೊಂದಣಿ ಸಂಖ್ಯೆ: ಕೆಎ–05/ವಿ–2876 ಗೆ ಸಂಬಂಧಿಸಿದಂತೆ ಅಧಿಕೃತ ಸಹಿಗಾರರು, ಮೆಃ ದೇವಗಿರಿ ಸೀಲಿಂಗ್ ಮತ್ತು ಕೋಟಿಂಗ್ಸ್, ನಂ.2969, ಕೆ.ಆರ್.ರೋಡ್, ಬಿ.ಎಸ್.ಕೆ 2 ನೇ ಹಂತ, ಬೆಂಗಳೂರು–560070 ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:20.03.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿದೆ. ನೊಂದಣಿ ಅಂಚೆ ಹಿಂತಿರುಗಿ ಬಂದಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಿ.ವಿ.ಎಸ್ ಚಾಂಪ್ ಮೊಪೆಡ್ ನೊಂದಣಿ ಸಂಖ್ಯೆ: ಕೆಎ–05/ವಿ–2876 ವಾಹನದಲ್ಲಿ ದಿನಾಂಕ:16.01.2009 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ.ಅಲ್ಲದೇ ಜಪ್ತುಪಡಿಸಿರುವ ವಾಹನ ಮತ್ತು ನಕಲಿ ಮದ್ಯವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನ ಮತ್ತು ನಕಲಿ ಮದ್ಯವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/176/2008–09, ದಿನಾಂಕ:30ನೇ ಮಾರ್ಚ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪನಿರೀಕ್ಷಕರು, ಮದ್ದೂರುವಲಯ, ಮದ್ದೂರು ಇವರ ಪ್ರ.ಮಾ.ವ ಸಂಖ್ಯೆ:17/2008–09, ದಿನಾಂಕ:16.01.2009 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಟಿ.ವಿ.ಎಸ್ ಚಾಂಪ್ ಮೊಪೆಡ್ ನೊಂದಣಿ ಸಂಖ್ಯೆ:ಕೆಎ–05/ವಿ–2876 ವಾಹನ ಮತ್ತು 17.280 ಲೀ ನಕಲಿ ಮದ್ಯ (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಹಾಗೂ ಇತರೆ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:30.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ

ಪಿ.ಆರ್.321 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/204/2008–09, ದಿನಾಂಕ:30ನೇ ಮಾರ್ಚ್, 2009**

ಅಬಕಾರಿ ಉಪ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಪ್ರ.ಮಾ.ವ ಸಂ:08/2008–09, ದಿನಾಂಕ:04.02.2009.

| ಪಿರ್ಯಾದುದಾರರು | ಆರೋಪಿ |
|---|---|
| ಅಬಕಾರಿ ಉಪ ನಿರೀಕ್ಷಕರು,<br>ಮಂಡ್ಯ ವಲಯ, ಮಂಡ್ಯ | ತಲೆಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:04.02.2009 ರಂದು ಬೆಳಗ್ಗೆ 10–30 ಗಂಟೆ ಸಮಯದಲ್ಲಿ ಮಂಡ್ಯ ತಾಲ್ಲೂಕು ಹಳುವಾಡಿ ಗ್ರಾಮದ ಶ್ರೀನಿವಾಸ ಕಲ್ಯಾಣಮಂಟಪದ ಎದುರುಗಡೆ ರಸ್ತೆಯ (ಮೊದಲನೇ ಕ್ರಾಸ್) ಬಲಭಾಗಕ್ಕಾದಂತೆ ಇರುವ ಹಂದಿಗೂಡು ಇರುವ ಪಕ್ಕದ ಖಾಲಿ ಜಾಗದಲ್ಲಿ ಅಕ್ರಮವಾಗಿ 216.000 ಲೀ ನಕಲಿ ಮದ್ಯವನ್ನು ಮಾರುತಿ 800 ಕಾರ್ ನೊಂದಣಿ ಸಂಖ್ಯೆ: ಕೆಎ–10/ಎನ್–3625 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 13(ಎ) ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32(1), 38(ಎ), 43 ಮತ್ತು 43(ಎ) ರೀತ್ಯಾ ಶಿಕ್ಷಾರ್ಹ ವಾದ್ದರಿಂದ ವಾಹನ ಮತ್ತು ನಕಲಿ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ: 08/2008–09 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು ಅವುಗಳು ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ಸ್ ನಿಗದಿಪಡಿಸಿರುವ ಮಾದರಿ ಗುಣಲಕ್ಷಣಗಳಿಗೆ ಅನುಗುಣವಾಗಿಲ್ಲದಿರುವುದರಿಂದ ಅವು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರು ಮೇಲ್ಕಂಡ ಸಂಖ್ಯೆಯುಳ್ಳ ವಾಹನವನ್ನು ಇನ್ನೂ ನೊಂದಣಿ ಮಾಡಿರುವುದಿಲ್ಲ ಎಂದು ತಿಳಿಸಿರುವುದರಿಂದ ವಾಹನದ ಮಾಲೀಕರು ಯಾರೆಂದು ತಿಳಿಯದ ಕಾರಣ ಹಾಗೂ ಇದುವರೆವಿಗೂ ಯಾರು ಕಚೇರಿಗೆ ಬಂದು ಹಕ್ಕು ಚಲಾಯಿಸದ ಕಾರಣ ವಾಹನ ಮತ್ತು ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:18–03–2009 ರ ಪತ್ರದ ಮೂಲಕ ಕೋರಿರುತ್ತಾರೆ.

ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರಿಗೆ ಪತ್ರ ಬರೆಯಲಾಗಿದ್ದು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ದಿನಾಂಕ:13.02.2009ರ ಪತ್ರದ ಮೂಲಕ ವಾಹನ ಸಂಖ್ಯೆ: ಕೆಎ–10/ಎನ್–3625 ಸಂಖ್ಯೆಯನ್ನು ಈವರೆವಿಗೂ ನೊಂದಣಿ ಮಾಡಿರುವುದಿಲ್ಲ ಎಂಬ ವಿಷಯವನ್ನು ತಿಳಿಸಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಮಾರುತಿ 800 ಕಾರ್ ನಕಲಿ ನೊಂದಣಿ ಸಂಖ್ಯೆ: ಕೆಎ–10/ಎನ್–3625 ವಾಹನದಲ್ಲಿ ದಿನಾಂಕ:04.02.2009 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಹಾಗೂ ಅಕ್ರಮ ನಕಲಿ ಮದ್ಯ ಚಟುವಟಿಕೆ ನಡೆಸುವ ಸಲುವಾಗಿ ವಾಹನಕ್ಕೆ ನಕಲಿ ಸಂಖ್ಯೆಯನ್ನು ಬಳಸಿ ಉಪಯೋಗಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಅಲ್ಲದೇ ಜಪ್ತು ಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನ ಮತ್ತು ನಕಲಿ ಮದ್ಯವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/204/2008–09, ದಿನಾಂಕ:30ನೇ ಮಾರ್ಚ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಪ್ರ.ಮಾ.ವ ಸಂಖ್ಯೆ:08/2008–09, ದಿನಾಂಕ:04.02.2009ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಮಾರುತಿ 800 ಕಾರ್ ನಕಲಿ ನೊಂದಣಿ ಸಂಖ್ಯೆ: ಕೆಎ–10/ಎನ್–3625 ವಾಹನ ಮತ್ತು 216.000 ಲೀ ನಕಲಿ ಮದ್ಯ (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಹಾಗೂ ಇತರೇ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:30.03.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.345 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/207/2007–08, ದಿನಾಂಕ:1ನೇ ಏಪ್ರಿಲ್, 2009**

ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೋಲೀಸ್ ಠಾಣೆ, ಮಂಡ್ಯ ಇವರ ಕ್ರೈಂ ಸಂಖ್ಯೆ:08/2008, ದಿನಾಂಕ:06.01.2008.

| **ಫಿರ್ಯಾದುದಾರರು** | **ಆರೋಪಿ** |
|---|---|
| ಆರಕ್ಷಕ ಉಪ ನಿರೀಕ್ಷಕರು,<br>ಗ್ರಾಮಾಂತರ ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು | ಚಂದ್ರ (ಉ) ಚಂದ್ರಶೇಖರ್ ಬಿನ್ ಸಿದ್ದಪ್ಪ,<br>42 ವರ್ಷ, ಒಕ್ಕಲಿಗ ಜನಾಂಗ, ಹಳೇಬೂದನೂರು ಗ್ರಾಮ,<br>ಮಂಡ್ಯ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:06.01.2008 ರಂದು ಸಾಯಂಕಾಲ 7–30 ಗಂಟೆ ಸಮಯದಲ್ಲಿ ಮಂಡ್ಯ ತಾಲ್ಲೂಕು ಬೇಲೂರು ಗ್ರಾಮದ ಚನ್ನಕೇಶವ ವೃತ್ತದಲ್ಲಿ ಅಕ್ರಮವಾಗಿ 3 ಪ್ಲಾಸ್ಟಿಕ್ ಚೀಲದಲ್ಲಿ 60.000 ಲೀ ಸಾರಾಯಿಯನ್ನು (100 ಮಿಲಿಯ 600 ಸಾರಾಯಿ ಸ್ಯಾಚೆಟ್‌ಗಳು) ಟಿ.ವಿ.ಎಸ್ ಮೊಪೆಡ್ ನೊಂದಣಿ ಸಂ: ಕೆಎ–10/ಹೆಚ್–6235 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 14,15,32,34 ರ ರೀತ್ಯಾ ಅಪರಾಧವಾದ್ದರಿಂದ ಈ ಬಗ್ಗೆ ಕ್ರೈಂ ಸಂಖ್ಯೆ: 08/2008 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರದ ಪೂರ್ವಾನುಮತಿ ಪಡೆದು ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಸಾರಾಯಿ ಸ್ಯಾಚೆಟ್‌ಗಳ ರಾಸಾಯನಿಕ ಪರೀಕ್ಷೆಯ ವರದಿಯ ಪ್ರಕಾರ ಸ್ಯಾಚೆಟ್‌ಗಳಲ್ಲಿ ಎಥನಾಲ್ ಅಂಶ ಇರುವುದು ಕಂಡು ಬಂದಿರುವುದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ವಾಹನ ಮತ್ತು ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟು ಗೋಲು ಹಾಕಿಕೊಳ್ಳಲು ದಿನಾಂಕ:13.06.2008, 13.03.2009 ಮತ್ತು 30.03.2009ರ ಪತ್ರಗಳ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು, ಸಾರಾಯಿ ಮತ್ತು ಇತರೆ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:13.10.2008 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಾಮರಾಜನಗರ ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ವಾಹನ ನೊಂದಣಿ ಸಂಖ್ಯೆ:ಕೆಎ–10/ಹೆಚ್–6235 ಗೆ ಸಂಬಂಧಿಸಿದಂತೆ ಶ್ರೀ ಜಿ.ವಿ.ನಾಗ, ನಂ.246, ಮಹದೇಶ್ವರ ಬೆಟ್ಟ, ಕೊಳ್ಳೇಗಾಲ ಇವರು ವಾಹನದ ಮಾಲೀಕರೆಂದು ತಿಳಿದು ಬಂದಿದ್ದು ಸದರಿಯವರಿಗೆ ದಿನಾಂಕ:17.02.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ಹಾಗೂ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರಿಂದ ಜಾರಿ ಮಾಡಿಸಲಾಗಿದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಿ.ವಿ.ಎಸ್ ಮೊಪೆಡ್ ನೊಂದಣಿ ಸಂಖ್ಯೆ: ಕೆಎ–10/ಹೆಚ್–6235 ವಾಹನದಲ್ಲಿ ದಿನಾಂಕ:06.01.2008 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ.ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/207/2007–08, ದಿನಾಂಕ:1ನೇ ಏಪ್ರಿಲ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು ಇವರ ಕ್ರೈಂ ಸಂಖ್ಯೆ:08/2008,

ದಿನಾಂಕ:06.01.2008 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಟಿ.ವಿ.ಎಸ್ ಮೊಪೆಡ್ ನೊಂದಣಿ ಸಂಖ್ಯೆ:ಕೆಎ–10/ಹೆಚ್–6235 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:01.04.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ

ಪಿ.ಆರ್.346 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/74/2008–09, ದಿನಾಂಕ:28ನೇ ಏಪ್ರಿಲ್, 2009**

ಅಬಕಾರಿ ಉಪ ನಿರೀಕ್ಷಕರು ನಂ.6,ರಾಜ್ಯ ವಿಚಕ್ಷಣದಳ, ಬೆಂಗಳೂರು ಇವರ ಪ್ರ.ಮಾ.ವ ಸಂಖ್ಯೆ:16/2008–09, ದಿನಾಂಕ:04.10.2008.

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು ನಂ.6, ರಾಜ್ಯ ವಿಚಕ್ಷಣ ದಳ, ಬೆಂಗಳೂರು. | 1) ರಜನಿ ಬಿನ್ ದಾಸೇಗೌಡ, 25 ವರ್ಷ, ಈಡಿಗರ ಜನಾಂಗ, ರಾಮಮಂದಿರ 2 ನೇ ಬೀದಿ, ಎಸ್.ಎಲ್.ಎನ್ ಬಡಾವಣೆ, ಸಾತನೂರು ಗ್ರಾಮ, ಕೆರಗೋಡು ಹೋಬಳಿ, ಮಂಡ್ಯ ತಾಲ್ಲೂಕು.<br>2)ದಾಸೇಗೌಡ ಬಿನ್ ವೆಂಕಟಗಿರಿಗೌಡ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:04.10.2008ರಂದು ಬೆಳಿಗ್ಗೆ 8–00 ಗಂಟೆ ಸಮಯದಲ್ಲಿ ಮಂಡ್ಯ ತಾಲ್ಲೂಕಿನ ಕೆರಗೋಡು ಹೋಬಳಿಯ ಸಾತನೂರು ಗ್ರಾಮದ ಎಸ್.ಎಲ್.ಎನ್ ಬಡಾವಣೆ ಗರೀಬಿ ಸೈಟ್ ರಾಮಮಂದಿರ 2 ನೇ ಬೀದಿಯಲ್ಲಿರುವ 2 ನೇ ಆರೋಪಿಗೆ ಸೇರಿದೆ ಎನ್ನಲಾದ ಮನೆ ನಂ.176 ಹಾಗೂ ಮುಂಭಾಗದಲ್ಲಿದ್ದ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ:ಸಿಕೆಎನ್–5420 ರಲ್ಲಿ ಅಕ್ರಮವಾಗಿ 17.280 ಲೀ ನಕಲಿ ಮದ್ಯ ಹಾಗೂ ನಕಲಿ ಮದ್ಯ ತಯಾರಿಸುವ ಇತರೆ ವಸ್ತುಗಳನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 32,38(ಎ)ಮತ್ತು 34 ರ ರೀತ್ಯಾ ಅಪರಾಧವಾದ್ದರಿಂದ ಈ ಬಗ್ಗೆ ಪ್ರ.ಮಾ.ವ ಸಂಖ್ಯೆ: 16/2008–09 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆ ಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು ಅವುಗಳು ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ಸ್ ನಿಗದಿಪಡಿಸಿರುವ ಮಾದರಿ ಗುಣಲಕ್ಷಣಗಳಿಗೆ ಅನುಗುಣವಾಗಿಲ್ಲದಿರುವುದರಿಂದ ಅವು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿ ಯಿಂದ ದೃಢಪಟ್ಟಿರುವುದರಿಂದ ವಾಹನ ಮತ್ತು ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:31.03.2008 ಹಾಗೂ 24.04.2008 ರ ಪತ್ರಗಳ ಮೂಲಕ ಕೋರಿರುತ್ತಾರೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಬೆಂಗಳೂರು (ಉತ್ತರ) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ನೊಂದಣಿ ಸಂಖ್ಯೆ: ಸಿಕೆಎನ್–5420 ಗೆ ಸಂಬಂಧಿಸಿದಂತೆ ಬಿ.ವಿ.ವಿಜಯಲಕ್ಷ್ಮಿ ಕೋಂ ವೆಂಕಟಗಿರಿಗೌಡ, ನಂ.232, 1 ನೇ ಮೈನ್ ರೋಡ್, 1ನೇ ಬ್ಲಾಕ್, ಆರ್.ಟಿ.ನಗರ, ಬೆಂಗಳೂರು–32 ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:17.02.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಮುಖಾಂತರ ಹಾಗೂ ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಹಿಂತಿರುಗಿ ಬಂದಿರುತ್ತದೆ ಹಾಗೂ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರು ದಿನಾಂಕ:17.03.2009 ಪತ್ರದ ಮೂಲಕ ಮೇಲ್ಕಂಡ ವಾಹನದ ಮಾಲೀಕರಿಗೆ ನೋಟೀಸ್ ಜಾರಿ ಮಾಡಲು ಹೋಗಿದ್ದಾಗ ವಾಹನದ ಮಾಲೀಕರು ಮೃತಪಟ್ಟಿರುವುದು ತಿಳಿದುಬಂದಿರುವುದಾಗಿ ತಿಳಿಸಿ ಮರಣ ದೃಢೀಕರಣ ಪತ್ರವನ್ನು ಲಗತ್ತಿಸಿ ಸಲ್ಲಿಸಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ: ಸಿಕೆಎನ್–5420 ವಾಹನದಲ್ಲಿ ದಿನಾಂಕ:04.10.2008 ರಂದು ಅಕ್ರಮವಾಗಿ ಮದ್ಯಸಾರ ಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ.ಅಲ್ಲದೇ ಜಪ್ತುಪಡಿಸಿರುವ ವಾಹನ ಮತ್ತು ನಕಲಿ ಮದ್ಯವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ

ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನ ಮತ್ತು ಮದ್ಯವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/74/2008–09, ದಿನಾಂಕ:28ನೇ ಏಪ್ರಿಲ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು ನಂ.6, ರಾಜ್ಯ ವಿಚಕ್ಷಣದಳ, ಬೆಂಗಳೂರು ಇವರ ಪ್ರ.ಮಾ.ವ ಸಂಖ್ಯೆ:16/2008–09, ದಿನಾಂಕ:04.10.2008 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ:ಸಿಕೆಎನ್–5420 ವಾಹನ, 17.280 ಲೀ. ನಕಲಿ ಮದ್ಯ (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ), ಖಾಲಿ ಬಾಟಲುಗಳು, ಪ್ಲಾಸ್ಟಿಕ್ ಕ್ಯಾನ್, ಬ್ರಾಂಡ್ ಲೇಬಲ್‌ಗಳು, ಮುಚ್ಚಳಗಳು ಹಾಗೂ ಇತರೆ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:28.04.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ

ಪಿ.ಆರ್.390 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/53/2007–08, ದಿನಾಂಕ:28ನೇ ಏಪ್ರಿಲ್, 2009**

ಅಬಕಾರಿ ಉಪ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರ ಪ್ರ.ಮಾ.ವ ಸಂಖ್ಯೆ:17/2007–08, ದಿನಾಂಕ:19.09.2007.

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ನಿರೀಕ್ಷಕರು,<br>ಮದ್ದೂರು ವಲಯ, ಮದ್ದೂರು. | ಶ್ರೀಮಾನ್ ಬಿನ್ ಮಾದಪ್ಪ, 25 ವರ್ಷ, ಒಕ್ಕಲಿಗ ಜನಾಂಗ, ವೃತ್ತಿ: ವ್ಯವಸಾಯ, ಹಳೇಬೂದನೂರು ಗ್ರಾಮ, ಮಂಡ್ಯ ತಾಲ್ಲೂಕು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:19.09.2007 ರಂದು ಸಾಯಂಕಾಲ 7–00 ಗಂಟೆ ಸಮಯದಲ್ಲಿ ಮದ್ದೂರು ತಾಲ್ಲೂಕಿನ ಮೈಸೂರು–ಬೆಂಗಳೂರು ರಸ್ತೆಯ ಹೆಮ್ಮನಹಳ್ಳಿ ಗ್ರಾಮಕ್ಕೆ ಹೋಗುವ ಅಡ್ಡರಸ್ತೆಯಲ್ಲಿರುವ ಆರ್.ಎಂ.ಸಿ ಯಾರ್ಡ್ ಚೆಕ್‌ಪೋಸ್ಟ್ ಬಳಿ ಅಕ್ರಮವಾಗಿ 17.280 ಲೀ. ನಕಲಿ ಮದ್ಯವನ್ನು ಹೀರೋ ಹೋಂಡಾ ಬೈಕ್ ನೊಂದಣಿ ಸಂಖ್ಯೆ: ಕೆಎ–05/ಇಕೆ–7580 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 13(ಎಫ್) ಮತ್ತು 14 ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 34, 38(ಎ), 43 ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಮತ್ತು ನಕಲಿ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ:06/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದ ತಾತ್ಕಾಲಿಕ ಬಿಡುಗಡೆ ಕೋರಿ ವಾಹನದ ಮಾಲೀಕರಾದ ಶ್ರೀ ಸಿ. ಪೂರ್ಣಚಂದ್ರ ಬಿನ್ ಚೆನ್ನಂಕಯ್ಯ, ಹೆಮ್ಮನಹಳ್ಳಿ, ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು ಇವರ ಜಿ.ಪಿ.ಎ ಹೋಲ್ಡರ್ ಎನ್ನಲಾದ ಶ್ರೀ ಸಿ.ಚೌಡಯ್ಯ ಬಿನ್ ಚೌಡಯ್ಯ, ಹೆಮ್ಮನಹಳ್ಳಿ, ಮದ್ದೂರು ತಾಲ್ಲೂಕು ಮಂಡ್ಯ ಜಿಲ್ಲೆ, ಮಂಡ್ಯ ಇವರು ದಿನಾಂಕ:05.11.2007 ರಂದು ಅರ್ಜಿ ಸಲ್ಲಿಸಿದ್ದರು. ಈ ಸಂಬಂಧ ಸಹಾಯಕ ಅಭಿಯೋಗ ನಿರ್ದೇಶಕರು, ಮಂಡ್ಯ ಜಿಲ್ಲೆ ಇವರ ಸ್ಪಷ್ಟ ಅಭಿಪ್ರಾಯವನ್ನು ಕೋರಲಾಗಿತ್ತು.

ಸಹಾಯಕ ಅಭಿಯೋಗ ನಿರ್ದೇಶಕರು ಅರ್ಜಿದಾರರ ಮನವಿಗೆ ಸಂಬಂಧಿಸಿದಂತೆ ವಾಹನವನ್ನು ಮಧ್ಯಂತರ ವಶಕ್ಕೆ ನೀಡಿದ್ದಲ್ಲಿ ಮೇಲ್ಕಂಡ ವಾಹನವನ್ನು ಪುನಃ ಇಂತಹುದೇ ಅಪರಾಧಕ್ಕೆ ಬಳಸುವ ಹಾಗೂ ಅದರ ಬಣ್ಣ, ಆಕಾರ, ರಚನೆ ಮತ್ತು ವಗೈರೆ ಬದಲಾಯಿಸುವ ಮತ್ತು ವರ್ಗಾವಣೆ ಮಾಡುವ ಸಾಧ್ಯತೆ ಇರುವುದರಿಂದ ಮಧ್ಯಂತರ ವಶಕ್ಕೆ ಕೋರಿರುವ ಅರ್ಜಿದಾರರ ಅರ್ಜಿಯನ್ನು ತಿರಸ್ಕರಿಸಬೇಕೆಂದು ಆಕ್ಷೇಪಣೆ ಸಲ್ಲಿಸಿದ್ದರು. ಈ ಹಿನ್ನೆಲೆಯಲ್ಲಿ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು(ಪ್ರ), ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಆದೇಶ ಸಂ: ಡಿಟಿಸಿಆರ್/53/2007–08, ದಿನಾಂಕ:06.12.2007 ರ ಆದೇಶದಲ್ಲಿ ಅರ್ಜಿದಾರರ ಮನವಿಯನ್ನು ತಿರಸ್ಕರಿಸಲಾಗಿರುತ್ತದೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:13.11.2007ರ ಪತ್ರದ ಮೂಲಕ ಕೋರಿರುತ್ತಾರೆ. ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡವಳಿಗಳನ್ನು ಕೈಗೊಂಡಿದ್ದು, ಮದ್ಯವನ್ನು ದಿನಾಂಕ:19.11.2007 ರ ಆದೇಶದಲ್ಲಿ ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ.

ವಾಹನದ ಮಾಲೀಕರಾದ ಶ್ರೀ ಸಿ.ಪೂರ್ಣಚಂದ್ರ ಬಿನ್ ಚೆನ್ನಂಕಯ್ಯ ಇವರಿಗೆ ದಿನಾಂಕ:21.01.2008 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮದ್ದೂರು ತಾಲ್ಲೂಕು ಇವರ ಮುಖಾಂತರ ಜಾರಿ ಮಾಡಿಸಲಾಗಿದ್ದು, ವಾಹನದ ಮಾಲೀಕರು ದಿನಾಂಕ:15.04.2008 ರ ಪತ್ರದ ಮೂಲಕ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನವನ್ನು ಶ್ರೀಮಾನ್ ಎಂಬ ವ್ಯಕ್ತಿಯು ಪಡೆದಿದ್ದು, ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಕರಾರು ಏನು ಇಲ್ಲವೆಂದು ತಿಳಿಸಿರುತ್ತಾರೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ದಕ್ಷಿಣ) ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ವಾಹನ ನೊಂದಣಿ ಸಂಖ್ಯೆ: ಕೆಎ–05/ಇಕೆ–7580 ಗೆ ಸಂಬಂಧಿಸಿದಂತೆ ಶ್ರೀ ಸಿ.ಪೂರ್ಣಚಂದ್ರ ಬಿನ್ ಚೆನ್ನಂಕಯ್ಯ, ಹೆಮ್ಮನಹಳ್ಳಿ, ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು ಜಿಲ್ಲೆ ಇವರು ವಾಹನದ ಮಾಲೀಕರೆಂದು ತಿಳಿದು ಬಂದಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಹೀರೋ ಹೋಂಡಾ ಸ್ಪ್ಲೆಂಡರ್ ಬೈಕ್ ನೊಂದಣಿ ಸಂಖ್ಯೆ: ಕೆಎ–05/ಇಕೆ–7580 ವಾಹನದಲ್ಲಿ ದಿನಾಂಕ:19.09.2007 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/53/2007–08, ದಿನಾಂಕ:28ನೇ ಏಪ್ರಿಲ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರ ಪ್ರ.ಮಾ.ವ ಸಂಖ್ಯೆ:06/2007–08, ದಿನಾಂಕ:19.09.2007 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಹೀರೋ ಹೋಂಡಾ ಸ್ಪ್ಲೆಂಡರ್ ಬೈಕ್ ನೊಂದಣಿ ಸಂಖ್ಯೆ:ಕೆಎ–05/ಇಕೆ–7580 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:28.04.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.391 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/201/2008–09, ದಿನಾಂಕ:28ನೇ ಏಪ್ರಿಲ್, 2009**

ಆರಕ್ಷಕ ಉಪ ನಿರೀಕ್ಷಕರು, ಕೆ.ಎಂ.ದೊಡ್ಡಿ ಪೋಲೀಸ್ ಠಾಣೆ, ಮದ್ದೂರು ತಾಲ್ಲೂಕು ಇವರ ಕ್ರೈಂ ಸಂಖ್ಯೆ: 173/2008, ದಿನಾಂಕ:01.09.2008.

| **ಪಿರ್ಯಾದುದಾರರು** | **ಆರೋಪಿ** |
|---|---|
| ಆರಕ್ಷಕ ಉಪ ನಿರೀಕ್ಷಕರು, | ಕಾಂತರಾಜು ಬಿನ್ ರಾಮೇಗೌಡ, 26 ವರ್ಷ, |
| ಕೆ.ಎಂ.ದೊಡ್ಡಿ ಪೋಲೀಸ್ ಠಾಣೆ, ಮದ್ದೂರು ತಾಲ್ಲೂಕು | ಹನುಮನಕೊಪ್ಪಲು, ಬಿಂಡಿಗನವಿಲೆ ಹೋಬಳಿ, |
| | ನಾಗಮಂಗಲ ತಾಲ್ಲೂಕು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:01.09.2008 ರಂದು ಮಧ್ಯಾಹ್ನ 2–30 ಗಂಟೆ ಸಮಯದಲ್ಲಿ ಮದ್ದೂರು ತಾಲ್ಲೂಕು ಆಣ್ಣೂರು ಕ್ರಾಸ್ ಬಳಿ ಆರೋಪಿ ಅಕ್ರಮವಾಗಿ 25.920 ಲೀ. ಮದ್ಯವನ್ನು ಕೆನೆಟಿಕ್ ಹೋಂಡಾ ಸ್ಕೂಟರ್ ನೊಂದಣಿ ಸಂಖ್ಯೆ:ಕೆಎ–01/ವಿ–8521

ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದು ದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 32 ಮತ್ತು 34 ರ ರೀತ್ಯಾ ಅಪರಾಧವಾದ್ದರಿಂದ ಈ ಬಗ್ಗೆ ಕ್ರೈಂ ಸಂಖ್ಯೆ: 173/2008 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರದ ಪೂರ್ವಾನುಮತಿ ಪಡೆದು ಅಬಕಾರಿ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರಿಗೆ ಹಸ್ತಾಂತರಿಸಿರುತ್ತಾರೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಬೆಂಗಳೂರು (ಸೆಂಟ್ರಲ್) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ನೊಂದಣಿ ಸಂಖ್ಯೆ: ಕೆಎ–01/ವಿ–8521ಗೆ ಸಂಬಂಧಿಸಿದಂತೆ ಡಾ: ಸೀಮಾ ಬಿನ್ ಆರ್.ಎನ್.ಶರ್ಮ, ನಂ.41, 2 ನೇ ಮಹಡಿ, ಪೋರ್ಟ್ ರಸ್ತೆ, ಶಾಂತಿನಗರ, ಬೆಂಗಳೂರು–27 ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:09.02.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿದೆ. ನೊಂದಣಿ ಅಂಚೆ ಹಿಂತಿರುಗಿ ಬಂದಿರುತ್ತದೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳ ರಾಸಾಯನಿಕ ಪರೀಕ್ಷೆಯ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಎಥನಾಲ್ ಅಂಶ ಇರುವುದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ: 30.01.2008, 25.03.2008 ಮತ್ತು 24.04.2008 ರ ಪತ್ರಗಳ ಮೂಲಕ ಕೋರಿರುತ್ತಾರೆ.

ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು, ಮದ್ಯ ಮತ್ತು ಇತರೆ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:04.04.2009 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಕೆನೆಟಿಕ್ ಹೋಂಡಾ ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ–01/ವಿ–8521 ವಾಹನದಲ್ಲಿ ದಿನಾಂಕ:01.09.2008 ರಂದು ಅಕ್ರಮವಾಗಿ ಮದ್ಯಸಾರ ಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ.ಅಲ್ಲದೇ ಜಪ್ತುಪಡಿಸಿರುವ ವಾಹನ ಮತ್ತು ಮದ್ಯವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/201/2008–09, ದಿನಾಂಕ:28ನೇ ಏಪ್ರಿಲ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಕೆ.ಎಂ.ದೊಡ್ಡಿ ಪೋಲೀಸ್ ಠಾಣೆ, ಮದ್ದೂರು ತಾಲ್ಲೂಕು ಇವರ ಕ್ರೈಂ ಸಂಖ್ಯೆ:173/2008, ದಿನಾಂಕ:01.09.2008 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಕೆನೆಟಿಕ್ ಹೋಂಡಾ ಸ್ಕೂಟರ್ ನೊಂದಣಿ ಸಂಖ್ಯೆ:ಕೆಎ–01/ವಿ–8521 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:28.04.2009 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ

ಪಿ.ಆರ್.392 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/202/2008–09, ದಿನಾಂಕ:22ನೇ ಮೇ, 2009**

ಆರಕ್ಷಕ ಉಪ ನಿರೀಕ್ಷಕರು, ಕೆರಗೋಡು ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ:67/2008, ದಿನಾಂಕ:21.05.2008.

**ಉಪಸ್ಥಿತರು:** ಡಾ: ವೈ.ಮಂಜುನಾಥ್,

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ.

| ಪಿರ್ಯಾದುದಾರರು | ಆರೋಪಿ |
|---|---|
| ಆರಕ್ಷಕ ಉಪ ನಿರೀಕ್ಷಕರು,<br>ಕೆ.ಎಂ.ದೊಡ್ಡಿ ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು. | ತಲೆಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:21.05.2008 ರಂದು ಸುಮಾರು ರಾತ್ರಿ 10.00 ಗಂಟೆಯ ಸಮಯದಲ್ಲಿ ಮಂಡ್ಯ ತಾಲ್ಲೂಕಿನ ಕೆರಗೋಡು ಹೋಬಳಿಯ ಹುಲಿವಾನ ಗ್ರಾಮದಲ್ಲಿ ಬಜಾಜ್ ಸ್ಕೂಟರ್ ಸಂಖ್ಯೆ:ಕೆಎ–03/ಇಬಿ–9559 ವಾಹನದಲ್ಲಿ ಅಕ್ರಮವಾಗಿ 13.500 ಲೀ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 32 ಮತ್ತು 34 ರ ರೀತ್ಯಾ ಅಪರಾಧವಾದ್ದರಿಂದ ಮೇಲ್ಕಂಡ ವಾಹನ ಮತ್ತು ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ:67/2008 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರದ ಪೂರ್ವಾನುಮತಿಯಂತೆ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರಿಗೆ ವಶಪಡಿಸಿ ಕೊಂಡಿರುವ ವಸ್ತುಗಳನ್ನು ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರಕಾರ ಮದ್ಯದ ಮಾದರಿ ಸೀಸೆಗಳಲ್ಲಿ ಎಥನಾಲ್ ಅಂಶ ಇರುವುದು ದೃಡಪಟ್ಟಿರುವುದರ ಮೇರೆ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:16.08.2008, 13.03.2009 ಮತ್ತು 19.05.2009 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಬಜಾಜ್ ಸ್ಕೂಟರ್ ಸಂಖ್ಯೆ: ಕೆಎ–03/ಇಬಿ–9559 ವಾಹನಕ್ಕೆ ಸಂಬಂಧ ಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಪೂರ್ವ) ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ನೊಂದಣಿ ಸಂಖ್ಯೆ: ಕೆಎ–03/ಇಬಿ–9559 ವಾಹನಕ್ಕೆ ಸಂಬಂಧಿಸಿದಂತೆ ಶ್ರೀ ಟಿ.ಎಸ್.ಮಣಿ ಬಿನ್ ವಿ.ಎಂ.ಡ್ಯೆರಿ, ಸಿಂಡಿಕೇಟ್ ಬ್ಯಾಂಕ್ ಹಿಂಭಾಗ, ಕೋಣೇನ ಅಗ್ರಹಾರ, ಹೆಚ್.ಎ.ಎಲ್, ಬೆಂಗಳೂರು–17 ಇವರು ವಾಹನದ ಮಾಲೀಕರೆಂದು ತಿಳಿದಿದ್ದು, ಸದರಿಯವರಿಗೆ ದಿನಾಂಕ: 09–02–2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಮೇಲ್ಕಂಡ ವಿಳಾಸದಲ್ಲಿ ಸ್ವೀಕೃತಿಯಾಗಿರುತ್ತದೆ

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 13.500 ಲೀ ಮದ್ಯ ಮತ್ತು ಇತರೆ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:04.04.2009 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಸ್ಕೂಟರ್ ಸಂಖ್ಯೆ: ಕೆಎ–03/ಇಬಿ–9559 ವಾಹನದಲ್ಲಿ ದಿನಾಂಕ:21.05.2008 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟು ಕೊಂಡಲ್ಲಿ ಹವಾಮಾನದ ವ್ಯೆಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿವೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/202/2008–09, ದಿನಾಂಕ:22ನೇ ಮೇ, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಕೆರಗೋಡು ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ: 67/2008, ದಿನಾಂಕ:21.05.2008 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಬಜಾಜ್ ಸ್ಕೂಟರ್ ಸಂಖ್ಯೆ: ಕೆಎ–03/ಇಬಿ–9559 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:22.05.2009 ರಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.483

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/203/2008-09, ದಿನಾಂಕ:22ನೇ ಮೇ, 2009**

ಆರಕ್ಷಕ ಉಪ ನಿರೀಕ್ಷಕರು, ಕೆರಗೋಡು ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ:60/2008, ದಿನಾಂಕ:09.05.2008.

**ಉಪಸ್ಥಿತರು:** ಡಾ: ವೈ.ಮಂಜುನಾಥ್,

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿ** |
|---|---|
| ಆರಕ್ಷಕ ಉಪ ನಿರೀಕ್ಷಕರು,<br>ಕೆ.ಎಂ.ದೊಡ್ಡಿ ಪೋಲೀಸ್ ಠಾಣೆ,<br>ಮಂಡ್ಯ ತಾಲ್ಲೂಕು. | ತಲೆಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:09.05.2008 ರಂದು ಸುಮಾರು ಮಧ್ಯರಾತ್ರಿ 12.30 ಗಂಟೆಯ ಸಮಯದಲ್ಲಿ ಮಂಡ್ಯ ತಾಲ್ಲೂಕಿನ ಕೆರಗೋಡು ಹೋಬಳಿಯ ನಲ್ಲಹಳ್ಳಿ-ಹೊಡಘಟ್ಟ ಮದ್ಯ ರಸ್ತೆಯಲ್ಲಿ ಟಾಟಾ ಸುಮೋ ಸಂಖ್ಯೆ:ಕೆಎ-02/ಎನ್-6303 ವಾಹನದಲ್ಲಿ ಅಕ್ರಮವಾಗಿ 336.960 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 32 ಮತ್ತು 34 ರ ರೀತ್ಯಾ ಅಪರಾಧವಾದ್ದರಿಂದ ಮೇಲ್ಕಂಡ ವಾಹನ ಮತ್ತು ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ:60/2008 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರದ ಪೂರ್ವಾನುಮತಿಯಂತೆ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರಿಗೆ ವಶಪಡಿಸಿ ಕೊಂಡಿರುವ ವಸ್ತುಗಳನ್ನು ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರಕಾರ ಮದ್ಯದ ಮಾದರಿ ಸೀಸೆಗಳಲ್ಲಿ ಎಥನಾಲ್ ಅಂಶ ಇರುವುದು ದೃಡಪಟ್ಟಿರುವುದರ ಮೇರೆ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:16.08.2008, 13.03.2009 ಮತ್ತು 19.05.2009 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಟಾಟಾ ಸುಮೋ ಸಂಖ್ಯೆ: ಕೆಎ-02/ಎನ್-6303 ವಾಹನಕ್ಕೆ ಸಂಬಂಧ ಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಪಶ್ಚಿಮ) ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ನೊಂದಣಿ ಸಂಖ್ಯೆ: ಕೆಎ-02/ ಎನ್-6303 ವಾಹನಕ್ಕೆ ಸಂಬಂಧಿಸಿದಂತೆ ಶ್ರೀಮತಿ ನಾಗರತ್ನಮ್ಮ ಕೋಂ ಗಂಗಾಧರ, ನಂ.175/5, ಲಗ್ಗೆರೆ, ರಾಜಗೋಪಾಲನಗರ, ಪೀಣ್ಯ 2ನೇ ಹಂತ, ಬೆಂಗಳೂರು-ಇವರು ವಾಹನದ ಮಾಲೀಕರೆಂದು ತಿಳಿದಿದ್ದು, ಸದರಿಯವರಿಗೆ ದಿನಾಂಕ:09.02.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಹಿಂತಿರುಗಿ ಬಂದಿರುತ್ತದೆ. ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರು ದಿನಾಂಕ:17.03.2009 ರ ಪತ್ರದ ಮೂಲಕ ಮೇಲ್ಕಂಡ ವಾಹನದ ಮಾಲೀಕರಿಗೆ ನೋಟೀಸ್ ಜಾರಿ ಮಾಡುವ ಸಂಬಂಧ ಸಿಬ್ಬಂದಿಯು ತೆರಳಿದ್ದಾಗ ವಾಹನದ ಮಾಲೀಕರ ವಿಳಾಸವು ಸರಿಯಿಲ್ಲದೇ ಇರುವುದು ಕಂಡುಬಂದಿರುವ ಬಗ್ಗೆ ತಿಳಿಸಿ, ಈ ಬಗ್ಗೆ ಜರುಗಿಸಿರುವ ಮಹಜರ್‌ನ್ನು ಸಲ್ಲಿಸಿರುತ್ತಾರೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 336.960 ಲೀ ಮದ್ಯ ಮತ್ತು ಇತರೆ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:04.04.2009 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಾಟಾ ಸುಮೋ ಸಂಖ್ಯೆ: ಕೆಎ-02/ಎನ್-6303 ವಾಹನದಲ್ಲಿ ದಿನಾಂಕ:09.05.2008 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನಗಳನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವ ವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿವೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/203/2008–09, ದಿನಾಂಕ:22ನೇ ಮೇ, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಕೆರಗೋಡು ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು ಇವರ ಪ್ರ.ಮಾ.ವ ಸಂಖ್ಯೆ: 60/2008, ದಿನಾಂಕ:09.05.2008 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಟಾಟಾ ಸುಮೋ ಸಂಖ್ಯೆ: ಕೆಎ–02/ಎನ್–6303 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:22.05.2009 ರಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.484

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/120/2008–09, ದಿನಾಂಕ:18ನೇ ಮೇ, 2009**

ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಪ್ರ.ಮಾ.ವ ಸಂಖ್ಯೆ:06/2008–09, ದಿನಾಂಕ:21.10.2008.

**ಉಪಸ್ಥಿತರು:**ಡಾ: ವೈ.ಮಂಜುನಾಥ್
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ನಿರೀಕ್ಷಕರು<br>ಮಂಡ್ಯ ವಲಯ, ಮಂಡ್ಯ. | 1) ಭಾಗ್ಯಮ್ಮ ಕೋಂ ಲೇಟ್ ನಿಂಗರಾಜು, 45 ವರ್ಷ, ಈಡಿಗರ ಜನಾಂಗ, ಸಾತನೂರು ಗ್ರಾಮ, ಮಂಡ್ಯ ತಾಲ್ಲೂಕು.<br>2) ಬಲರಾಮ ಬಿನ್ ಲೇಟ್ ಶ್ರೀನಿವಾಸಯ್ಯ, 35 ವರ್ಷ, ಈಡಿಗರ ಜನಾಂಗ, ಸಾತನೂರು ಗ್ರಾಮ, ಮಂಡ್ಯ ತಾಲ್ಲೂಕು.<br>3) ಎಸ್.ಗೋಪಾಲಕೃಷ್ಣ ಬಿನ್ ಲೇಟ್ ಶ್ರೀನಿವಾಸಯ್ಯ, 48 ವರ್ಷ, ಸಾತನೂರು ಗ್ರಾಮ, ಮಂಡ್ಯ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:21.10.2008 ರಂದು ಸುಮಾರು ಮಧ್ಯಾಹ್ನ 3.00 ಗಂಟೆಯ ಸಮಯದಲ್ಲಿ ಮಂಡ್ಯ ತಾಲ್ಲೂಕಿನ ಸಾತನೂರು ಗ್ರಾಮದ ಬೀರೇಶ್ವರ ಬಡಾವಣೆಯ ವಾಸಿಯಾದ ಗೋಪಾಲಕೃಷ್ಣ ಬಿನ್ ಶ್ರೀನಿವಾಸಯ್ಯ ಇವರಿಗೆ ಸೇರಿದ ಮನೆಯ ಮುಂದೆ ವಾಹನ ಮಾರುತಿ 800 ಕಾರು ಸಂಖ್ಯೆ: ಸಿಎವೈ–1411 ಮತ್ತು ಕವಾಸಕಿ ಬೈಕ್ ಸಂಖ್ಯೆ: ಕೆಎ–05/ಇಜಿ–1899 ಗಳಲ್ಲಿ ಅಕ್ರಮವಾಗಿ 60.000 ಲೀ ಮದ್ಯಸಾರ, 17.280 ಲೀ ನಕಲಿ ಮದ್ಯ ಹೊಂದಿ ಸಾಗಾಣಿಕೆ ಮಾಡುತ್ತಿದ್ದು ದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 32,38(ಎ)ಮತ್ತು 43(ಎ) ರೀತ್ಯಾ ಅಪರಾಧ ವಾದ್ದರಿಂದ ಮೇಲ್ಕಂಡ ವಾಹನಗಳು, ಮದ್ಯಸಾರ, ನಕಲಿ ಮದ್ಯ, ಒಂದು ನೋಕಿಯಾ ಮೊಬೈಲ್ ಫೋನ್, 35 ಲೀ ಸಾಮರ್ಥ್ಯದ 15 ಖಾಲಿ ಪ್ಲಾಸ್ಟಿಕ್ ಕ್ಯಾನುಗಳನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ:06/ 2008–09 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯ ಹಾಗೂ ಮದ್ಯಸಾರದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮದ್ಯಸಾರದ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಮಾನವನ ಸೇವನೆಗೆ ಬಳಸಬಹುದಾದ ಮದ್ಯವನ್ನು ತಯಾರಿಸಲು ಯೋಗ್ಯವಾಗಿರುತ್ತವೆ ಹಾಗೂ ಮದ್ಯದ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು ಅವುಗಳು ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ಸ್ ನಿಗದಿಪಡಿಸಿರುವ ಮಾದರಿ ಗುಣಲಕ್ಷಣಗಳಿಗೆ ಅನುಗುಣವಾಗಿಲ್ಲದಿರುವುದರಿಂದ ಅವು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನಗಳು, ಮದ್ಯಸಾರ, ನಕಲಿ ಮದ್ಯ, ಒಂದು ನೋಕಿಯಾ ಮೊಬೈಲ್ ಫೋನ್ ಹಾಗೂ ಇತರೇ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ: 13–03–2009 ಮತ್ತು 24–04–2009 ರ ಪತ್ರಗಳ ಮೂಲಕ ಕೋರಿ ರುತ್ತಾರೆ.

ಕವಾಸಕಿ ಬೈಕ್ ಸಂಖ್ಯೆ: ಕೆಎ–05/ಇಜಿ–1899 ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ದಕ್ಷಿಣ) ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ನೊಂದಣಿ ಸಂಖ್ಯೆ: ಕೆಎ–05/ ಇಜಿ–1899 ಗೆ ಸಂಬಂಧಿಸಿದಂತೆ ಶ್ರೀ ಪಿ.ದಿಲೀಪ್ ಚಳ್ಳಾನಿ ಬಿನ್ ಎಸ್.ಪಿ.ಚಳ್ಳಾನಿ, ನಂ.366/13, 1 ನೇ ಮಹಡಿ, 1 ನೇ ಕ್ರಾಸ್, ಲಕ್ಷ್ಮೀಪುರ, ಗವೀಪುರಂ ಎಕ್ಸ್‌ಟೆನ್ಷನ್, ಬೆಂಗಳೂರು–560019 ಇವರು ವಾಹನದ ಮಾಲೀಕರೆಂದು ತಿಳಿದಿದ್ದು,

ಸದರಿಯವರಿಗೆ ದಿನಾಂಕ:17.02.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಮುಖಾಂತರ ಹಾಗೂ ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಹಿಂತಿರುಗಿ ಬಂದಿರುತ್ತದೆ. ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರು ದಿನಾಂಕ:25.03.2009 ಪತ್ರದ ಮೂಲಕ ವಾಹನದ ಮಾಲೀಕರಿಗೆ ನೋಟೀಸ್ ಜಾರಿ ಮಾಡಲು ಹೋಗಿದ್ದಾಗ ಶ್ರೀ ಪಿ.ದಿಲೀಪ್ ಚಳ್ಳಾನಿ ಬಿನ್ ಎಸ್.ಪಿ.ಚಳ್ಳಾನಿ ಇವರು ಮೇಲ್ಕಂಡ ವಿಳಾಸದಲ್ಲಿ ಬಾಡಿಗೆಗೆ ವಾಸವಾಗಿದ್ದು ಸುಮಾರು ಏಳು ವರ್ಷಗಳ ಹಿಂದೆಯೇ ಮನೆ ಯನ್ನು ಖಾಲಿ ಮಾಡಿದ್ದು, ಈಗ ಎಲ್ಲಿದ್ದಾರೆಂದು ತಿಳಿದು ಬಂದಿರುವುದಿಲ್ಲವೆಂದು ತಿಳಿಸಿ, ಈ ಸಂಬಂಧ ಅಕ್ಕಪಕ್ಕದ ಮನೆ ಯವರ ಸಹಿಯಿರುವ ಮಹಜರ್‌ನ್ನು ಸಲ್ಲಿಸಿರುತ್ತಾರೆ.

ಮಾರುತಿ 800 ಕಾರು ಸಂಖ್ಯೆ: ಸಿಎವೈ-1411 ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಬೆಂಗಳೂರು (ಪೂರ್ವ) ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ನೊಂದಣಿ ಸಂಖ್ಯೆ: ಸಿಎವೈ-1411ಗೆ ಸಂಬಂಧಿಸಿದಂತೆ ಶ್ರೀ ಪುರುಷೋತ್ತಮ್ ಬಿನ್ ವೆಂಕಟೇಶ್, ನಂ.87, 4 ನೇ ಕ್ರಾಸ್, ಆರ್.ಎಸ್.ಪಾಳ್ಯ, ಎಂ.ಎಸ್.ನಗರ ಅಂಚೆ, ಬೆಂಗಳೂರು-560033 ಇವರು ವಾಹನದ ಮಾಲೀಕರೆಂದು ತಿಳಿದಿದ್ದು, ಸದರಿಯವರಿಗೆ ದಿನಾಂಕ:27.02.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಮುಖಾಂತರ ಹಾಗೂ ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಹಿಂತಿರುಗಿ ಬಂದಿರುತ್ತದೆ. ಹಾಗೂ ಸದರಿ "ಬಿ" ವಹಿಯಲ್ಲಿ ದಿನಾಂಕ:20-02-2008 ರಂದು ಮಾರುತಿ 800 ಕಾರು ಸಂಖ್ಯೆ: ಸಿಎವೈ-1411 ವಾಹನಕ್ಕೆ ಸಂಬಂಧಿಸಿದಂತೆ ತೀರುವಳಿ ಪತ್ರವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರಿಗೆ ನೀಡಿರುವುದು ಕಂಡು ಬಂದಿರುವುದರ ಮೇರೆ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರಿಗೆ ದಿನಾಂಕ:26.03.2009 ರ ಪತ್ರದ ಮೂಲಕ ಮಾರುತಿ 800 ಕಾರು ಸಂಖ್ಯೆ: ಸಿಎವೈ-1411 ವಾಹನದ "ಬಿ" ವಹಿಯನ್ನು ಕೋರಿ ಪತ್ರ ಬರೆಯಲಾಗಿತ್ತು.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ, ಮದ್ಯಸಾರ, ನಕಲಿ ಮದ್ಯ, ಒಂದು ನೋಕಿಯಾ ಮೊಬೈಲ್ ಫೋನ್, ಪ್ಲಾಸ್ಟಿಕ್ ಕ್ಯಾನುಗಳು ಮತ್ತು ಇತರೆ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:28.04.2009 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರು ದಿನಾಂಕ:14.05.2009 ರ ಪತ್ರದ ಮೂಲಕ ಮಾರುತಿ 800 ಕಾರು ಸಂ: ಸಿಎವೈ-1411 ವಾಹನವು ಅವರ ವಲಯಕ್ಕೆ ಸೇರ್ಪಡೆಯಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಮಾರುತಿ 800 ಕಾರು ಸಂಖ್ಯೆ: ಸಿಎವೈ-1411 ಮತ್ತು ಕವಾಸಕಿ ಬೈಕ್ ಸಂಖ್ಯೆ: ಕೆಎ-05/ ಇಜಿ-1899 ವಾಹನಗಳಲ್ಲಿ ದಿನಾಂಕ:21.10.2008 ರಂದು ಅಕ್ರಮ ವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನಗಳನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನಗಳನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನಗಳನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿವೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/120/2008-09, ದಿನಾಂಕ:18ನೇ ಮೇ, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಪ್ರ.ಮಾ.ವ ಸಂಖ್ಯೆ: 06/2008-09, ದಿನಾಂಕ:21.10.2008 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಮಾರುತಿ 800 ಕಾರು ಸಂಖ್ಯೆ: ಸಿಎವೈ-1411 ಮತ್ತು ಕವಾಸಕಿ ಬೈಕ್ ಸಂಖ್ಯೆ: ಕೆಎ-05/ಇಜಿ-1899 ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:18.05.2009 ರಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ

ಪಿ.ಆರ್.485 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'paper self adhesive tape'-reg.

**Ref:** Application Dated:29.06.2009 of Sri Harish Kumar H.R. Proprietor, Sai Enterprises, No.94, 10th Main Road, Ist Block, 3rd Stage, Manjunathanagar, Bangalore-560010.

In the application cited above, Sri Harish Kumar H.R. Proprietor, Sri Sai Enterprises, No.94, 10th Main Road, 1st Block, 3rd Stage, Manjunathanagar, Bangalore-560010, has sought clarification regarding the rate of tax applicable on 'paper self adhesive tape'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.59/09-10, Dated:1st August, 2009**

It is clarified that 'paper self adhesive tape' covered under CET code No.4811 41 00 is taxable at 12.5% under Section 4(1)(b) of the Karnataka Value Added Tax Act, 2003.

**PRADEEP SINGH KHAROLA**

PR-774

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'liquefied petroleum gas'-reg.

**Ref:** Application Dated:23.06.2009 of Sree LPG Private Limited, #230, Sharada Complex, 1st Main, Gokulam 2nd Stage, Mysore-570 002.

In the application cited above, Sree LPG Private Limited, #230, Sharada Complex, 1st Main, Gokulam 2nd Stage, Mysore-570 002, has sought clarification regarding the rate of tax applicable on 'liquefied petroleum gas' sold in cylinders of different capacities.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.56/09-10, Dated:4th August, 2009**

It is hereby clarified that 'liquefied petroleum gas cylinders' of 12 Kg capacity meant for domestic use are taxable @ 1% VAT in terms of the notification No.FD 148 CSL 2008(II), Dated:19.06.2008 and liquefied petroleum gas cylinders of 4 kg, 5.5kg and 17 kg capacity are taxable at 12.5% under Section 4(1)(b) of the KVAT Act, 2003.

**PRADEEP SINGH KHAROLA**

PR-775

Commissioner of Commercial Taxes,
(Karnataka), Bangalore.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/70/2007–08, ದಿನಾಂಕ:8ನೇ ಜೂನ್, 2009**

ಅಬಕಾರಿ ಉಪ ನಿರೀಕ್ಷಕರು, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಪ್ರ.ಮಾ.ವ ಸಂಖ್ಯೆ:04/2007–08, ದಿನಾಂಕ:12.11.2007.

**ಉಪಸ್ಥಿತರು:** ಡಾ: ವೈ.ಮಂಜುನಾಥ್

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ), ಮಂಡ್ಯ ಜಿಲ್ಲೆ, ಮಂಡ್ಯ.

| **ಫಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು<br>ವಿಚಕ್ಷಣ ದಳ, ಮಂಡ್ಯ ಜಿಲ್ಲೆ, ಮಂಡ್ಯ. | 1) ಮಹೇಶ್ ಬಿನ್ ಹೊನ್ನೇಗೌಡ, 31 ವರ್ಷ, ಒಕ್ಕಲಿಗರ ಜನಾಂಗ, ಜೈಪುರ(ತಿಬ್ಬನಹಳ್ಳಿ), ದುದ್ದ ಹೋಬಳಿ, ಮಂಡ್ಯ ತಾಲ್ಲೂಕು.<br>2)ನಿಂಗೇಗೌಡ ಬಿನ್ ಬಸವೇಗೌಡ, 28 ವರ್ಷ, ಒಕ್ಕಲಿಗರಜನಾಂಗ, ಜೈಪುರ (ತಿಬ್ಬನಹಳ್ಳಿ), ದುದ್ದ ಹೋಬಳಿ, ಮಂಡ್ಯ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:12.11.2007 ರಂದು ರಾತ್ರಿ 11–00 ಗಂಟೆಯ ಸಮಯದಲ್ಲಿ ಪಾಂಡವಪುರ ತಾಲ್ಲೂಕು, ಸುಂಕ ತಣ್ಣೂರು ಗ್ರಾಮದ ಬಸ್‌ಸ್ಟಾಪ್ ಮುಂಭಾಗದಲ್ಲಿ ಬಜಾಜ್ ಸ್ಕೂಟರ್ ಸಂಖ್ಯೆ: ಸಿಕೆಪಿ–2723 ವಾಹನದಲ್ಲಿ ಅಕ್ರಮವಾಗಿ 34.560 ಲೀ ನಕಲಿ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11, 14, 34, 38(ಎ), 43 ಮತ್ತು 43(ಎ) ರೀತ್ಯಾ ಅಪರಾಧವಾದ್ದರಿಂದ ಮೇಲ್ಕಂಡ ವಾಹನ ಮತ್ತು ನಕಲಿ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ:04/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮದ್ಯದ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಭಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ಇವು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನ ಮತ್ತು ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:17.01.2008, 14.05.2009 ಮತ್ತು 01.06.2009 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 34.560 ಲೀ ನಕಲಿ ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:18.01.2008 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಬಜಾಜ್ ಸ್ಕೂಟರ್ ಸಂಖ್ಯೆ:ಸಿಕೆಪಿ–2723 ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಸೆಂಟ್ರಲ್) ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ನೊಂದಣಿ ಸಂ:ಸಿಕೆಪಿ–2723ಗೆ ಸಂಬಂಧಿಸಿದಂತೆ ಶ್ರೀ ಜ್ಯೂಲಿಯಟ್ ಲೂಯಿಸ್, ನಂ.61, ಲಾಲ್‌ಬಾಗ್ ರೋಡ್, 1 ನೇ ಮುಖ್ಯರಸ್ತೆ, ಬೆಂಗಳೂರು – ಇವರು ವಾಹನದ ಮಾಲೀಕರೆಂದು ತಿಳಿದು ಬಂದಿದ್ದು, ಸದರಿಯವರಿಗೆ ದಿನಾಂಕ:06.03.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆಯು ಹಿಂತಿರುಗಿ ಬಂದಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಸ್ಕೂಟರ್ ಸಂಖ್ಯೆ:ಸಿಕೆಪಿ–2723 ವಾಹನದಲ್ಲಿ ದಿನಾಂಕ:12.11.2007 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/70/2007–08, ದಿನಾಂಕ:8ನೇ ಜೂನ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಪ್ರ.ಮಾ.ವ ಸಂಖ್ಯೆ:04/2007–08, ದಿನಾಂಕ:12.11.2007 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಬಜಾಜ್ ಸ್ಕೂಟರ್ ಸಂಖ್ಯೆ:ಸಿಕೆಪಿ–2723 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:08.06.2009 ರಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.523 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/363/2008–09, ದಿನಾಂಕ:8ನೇ ಜೂನ್, 2009**

ಅಬಕಾರಿ ಉಪ ನಿರೀಕ್ಷಕರು,ಮದ್ದೂರು ವಲಯ, ಮದ್ದೂರು ಇವರ ಪ್ರ.ಮಾ.ವ ಸಂಖ್ಯೆ:26/2008–09, ದಿನಾಂಕ:17.04.2009.

**ಉಪಸ್ಥಿತರು:** ಡಾ: ವೈ.ಮಂಜುನಾಥ್

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು<br>ಮದ್ದೂರು ವಲಯ, ಮದ್ದೂರು. | ತಲೆಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:17.04.2009 ರಂದು ಮಧ್ಯಾಹ್ನ 12–30 ಗಂಟೆಯ ಸಮಯದಲ್ಲಿ ಮದ್ದೂರು ತಾಲ್ಲೂಕು, ಕೊಪ್ಪ ಹೋಬಳಿ, ನಂಬಿನಾಯಕನಹಳ್ಳಿ –ಮಂಡ್ಯ ರಸ್ತೆ, ಬಸ್ ಸ್ಟ್ಯಾಂಡ್ ಬಳಿ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–03/ವೈ–9636 ವಾಹನದಲ್ಲಿ ಅಕ್ರಮವಾಗಿ 5.400 ಲೀ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11, 14, 32, 38(ಎ) ಮತ್ತು 43 ರೀತ್ಯಾ ಅಪರಾಧ ವಾದ್ದರಿಂದ ಮೇಲ್ಕಂಡ ವಾಹನ ಮತ್ತು ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ ಸಂಖ್ಯೆ:26/2008–09 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮದ್ಯದ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:01.06.2009 ರ ಪತ್ರದ ಮೂಲಕ ಕೋರಿರುತ್ತಾರೆ.

ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ–03/ವೈ–9636 ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಪೂರ್ವ) ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ನೊಂದಣಿ ಸಂಖ್ಯೆ: ಕೆಎ–03/ವೈ–9636ಗೆ ಸಂಬಂಧಿಸಿದಂತೆ ನಿರ್ದೇಶಕರು, ಮೆ: ಗಾರ್ಮೆಂಟ್ಸ್ ಇಂಟರ್‌ನ್ಯಾಷನಲ್ ಪ್ರೈವೇಟ್ ಲಿ, ನಂ.202,

ಮಿಡ್‌ಪೋರ್ಡ್ ಹೋಂ, ಮಿಡ್‌ಫೋರ್ಡ್ ಗಾರ್ಡನ್, ಬೆಂಗಳೂರು–560001–ಇವರು ವಾಹನದ ಮಾಲೀಕರೆಂದು ತಿಳಿದು ಬಂದಿದ್ದು, ಸದರಿಯವರಿಗೆ ದಿನಾಂಕ:25.05.2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆಯು ಹಿಂತಿರುಗಿ ಬಂದಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ಸಂ: ಕೆಎ–03/ವೈ–9636 ವಾಹನದಲ್ಲಿ ದಿನಾಂಕ:17.04.2009 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ಮದ್ಯ ಮತ್ತು ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ಮದ್ಯ ಮತ್ತು ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಅದೇಶ ಸಂಖ್ಯೆ: ಡಿಟಿಸಿಆರ್/363/2008–09, ದಿನಾಂಕ:8ನೇ ಜೂನ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರ ಪ್ರ.ಮಾ.ವ ಸಂಖ್ಯೆ: 26/2008–09, ದಿನಾಂಕ:17.04.2009 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ 5.400 ಲೀ ಮದ್ಯ ಮತ್ತು ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–03/ವೈ–9636 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:08.06.2009 ರಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ

ಪಿ.ಆರ್.524 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/513/2007–08, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು | | 1) ಮಾಕಲಪ್ಪ ಬಿನ್ ಲೇ॥ ರಾಮನಾಯ್ಕ |
| ಹುಣಸೂರು ವಲಯ, ಹುಣಸೂರು. | | 2) ವೆಂಕಟಮ್ಮ ಕೋಂ ರಾಮನಾಯ್ಕ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:12.06.2008 ರಂದು ಸಂಜೆ 6:15 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಹುಣಸೂರು ವಲಯ ಇವರು ಹುಣಸೂರು ತಾಲ್ಲೂಕು, ಕಸಬಾ ಹೋಬಳಿ, ತೊಂಡಾಳು ಪೋಸ್ಟ್‌ನ ಕಿರುಸೊಡ್ಲು ಗ್ರಾಮದ ಸರ್ವೆ ನಂ. 26/07 ರಲ್ಲಿಯ ಜಮೀನಿನ ಮದ್ಯದಲ್ಲಿರುವ ಮಾಕಲಪ್ಪ ಎಂಬುವವರ ಮನೆಯ ಮುಂಭಾಗದಲ್ಲಿ ಕೆಎ–45/ಇ–7065 ನೋಂದಣಿ ಸಂಖ್ಯೆಯ ಟಿ.ವಿ.ಎಸ್ ಸ್ಟಾರ್ ಡಿಲಕ್ಸ್ ವಾಹನದಲ್ಲಿ ಅಕ್ರಮವಾಗಿ 7.920 ಲೀ. ನಕಲಿ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: 04/07–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13(1)(ಎ) ರೀತ್ಯಾ ಅಪರಾಧವಾಗಿದ್ದು, ಕಲಂ 32, 38(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಮಾಕಲಪ್ಪ ಎಂಬ ಆರೋಪಿಯನ್ನು ಬಂಧಿಸಿ, ನ್ಯಾಯಾಲಯದ ವಶಕ್ಕೆ ಒಪ್ಪಿಸಿರುವುದಾಗಿ ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಹುಣಸೂರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:21.08.2008 ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಅದಕ್ಕೆ ಪ್ರತಿಕ್ರಿಯಿಸಿ, ತಮ್ಮ ಪತ್ರ ದಿನಾಂಕ:16.09.2008 ರಲ್ಲಿ 'ಬಿ' ವಹಿಯ ಪ್ರತಿಯನ್ನು ಕಳುಹಿಸಿರುತ್ತಾರೆ. ಇದನ್ನು ಪರಿಶೀಲಿಸಲಾಗಿ, ವೆಂಕಟಮ್ಮ ಕೋಂ ರಾಮನಾಯ್ಕ, ಕಿರುಸೊಡ್ಲು ಗ್ರಾಮ, ಹುಣಸೂರು ತಾ: ಇವರ ಒಡೆತನದಲ್ಲಿರುವುದು ದೃಢಪಟ್ಟಿರುತ್ತದೆ. ಸದರಿ ಮಾಲೀಕರಿಗೆ

ಕಲಂ 43(ಬಿ)ರ ಅಡಿಯಲ್ಲಿ ಈ ಪ್ರಾಧಿಕಾರದಿಂದ ದಿನಾಂಕ:21.10.08 ರಂದು ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಲಾಗಿದ್ದು, ದಿನಾಂಕ:24.10.08 ರಂದು ಮಾಲೀಕರಿಗೆ ಜಾರಿಗೊಳಿಸಿ, ಹುಣಸೂರು ನಿರೀಕ್ಷಕರು, ವರದಿ ಮಾಡಿರುತ್ತಾರೆ. ಶ್ರೀಮತಿ ವೆಂಕಟಮ್ಮ ಇವರು ದಿನಾಂಕ:30.10.08 ರಂದು ಈ ಪ್ರಾಧಿಕಾರಕ್ಕೆ ಮನವಿಯನ್ನು ಸಲ್ಲಿಸಿ, ಮುಟ್ಟುಗೋಲು ಪ್ರಕ್ರಿಯೆಯನ್ನು ಕೈ ಬಿಡಬೇಕೆಂದು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಮಾದಕ ದ್ರವ್ಯಗಳನ್ನು ಬೆಂಗಳೂರಿನ ಮುಖ್ಯ ರಾಸಾಯನಿಕ ತಜ್ಞರಿಗೆ ಕಳುಹಿಸಿ, ತಮ್ಮ ವರದಿ ದಿನಾಂಕ:27.08.08 ರಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಅವು ಭಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ಇವು ನಕಲಿ ಮದ್ಯವಾಗಿರುತ್ತದೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:12.06.2008 ರಂದು ಹುಣಸೂರು ತಾಲ್ಲೂಕು, ಕಸಬಾ ಹೋಬಳಿ, ತೊಂಡಾಳು ಪೋಸ್ಟ್‌ನ ಕಿರುಸೊಡ್ಲು ಗ್ರಾಮದ ಸರ್ವೇ ನಂ. 26/7 ರಲ್ಲಿಯ ಅಕ್ರಮವಾಗಿ 7.920 ಲೀ. ನಕಲಿ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಪ್ರಾಧಿಕಾರದಿಂದ ದಿನಾಂಕ:21.10.2008 ರಂದು ನೀಡಲಾದ ಕಾರಣ ಕೇಳುವ ನೋಟೀಸಿಗೆ ಪ್ರತಿಕ್ರಿಯಿಸಿ, ಮುಟ್ಟುಗೋಲು ಹಾಕಿಕೊಳ್ಳುವ ಪ್ರಕ್ರಿಯೆಯನ್ನು ಕೈ ಬಿಡಬೇಕೆಂದು ಮಾತ್ರ ಕೋರಲಾಗಿದೆ. ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ) ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು, ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ. ಅಲ್ಲದೇ ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಸಾಗಾಣಿಕೆ, ಮಾರಾಟದಂತಹ ವೃತ್ತಿಯಲ್ಲಿ ತೊಡಗಿ, ಸಾರ್ವಜನಿಕರ ಪ್ರಾಣಹಾನಿಯಾಗುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಆದ ಕಾರಣ ಈ ಕೃತ್ಯ ತನ್ನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ದಿನಾಂಕ:19.09.08 ರಂದು ಹುಣಸೂರು ವಲಯದ ಅಬಕಾರಿ ನಿರೀಕ್ಷಕರಿಗೆ ಮನವಿಯೊಂದನ್ನು ಸಲ್ಲಿಸಿ, ಈ ಕೃತ್ಯವು ಕಾನೂನಿನ ತಿಳುವಳಿಕೆಯಿಲ್ಲದೆ ಮಾಡಿರುವ ಕೃತ್ಯವಾಗಿದ್ದು, ವಾಹನಕ್ಕೆ ತಗಲುವ ಮೌಲ್ಯ ಮತ್ತು ವಿಧಿಸುವ ದಂಡವನ್ನು ಸರ್ಕಾರಕ್ಕೆ ಸಂದಾಯ ಮಾಡಲು ಬದ್ಧರಾಗಿರುವುದಾಗಿ ಒಪ್ಪಿ ತನ್ನ ಸುಪರ್ದಿಗೆ ಬಿಡುಗಡೆ ಮಾಡಲು ಕೋರಿರುತ್ತಾರೆ. ಈ ಬಗ್ಗೆ ಹುಣಸೂರು ವಲಯದ ಅಬ್ಕಾರಿ ನಿರೀಕ್ಷಕರು, ವಾಹನವನ್ನು ಬಿಡುಗಡೆಗೊಳಿಸಿದ್ದಲ್ಲಿ ಪುನಃ ಅದೇ ಕೃತ್ಯದಲ್ಲಿ ತೊಡಗುವ ಸಾಧ್ಯತೆ ಇರುವುದರಿಂದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ. ವಾಹನವನ್ನು ಅರ್ಜಿದಾರರ ವಶಕ್ಕೆ ಬಿಡುಗಡೆ ಮಾಡಿದಲ್ಲಿ ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಮಾದಕ ದ್ರವ್ಯಗಳನ್ನು ಸಾಗಾಣಿಕೆ ಮಾಡಲು ಮತ್ತು ಅಕ್ರಮ ಚಟುವಟಿಕೆಯಲ್ಲಿ ತೊಡಗಿಕೊಂಡು ಮತ್ತು ಇಂತಹ ಮಾದಕ ದ್ರವ್ಯಗಳನ್ನು ಸೇವಿಸುವ ಮುಗ್ಧ ಜನರ ಪ್ರಾಣ ಹಾನಿಯುಂಟಾಗುವ ಸಂಭವವಿರುತ್ತದೆ. ಇದರಿಂದಾಗಿ ಸಮಾಜದಲ್ಲಿ ಅಶಾಂತಿ ಏರ್ಪಡುವುದಲ್ಲದೇ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗುವ ಸಾಧ್ಯತೆಗಳಿರುವುದರಿಂದ ಇದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/513/2007–08, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ಹುಣಸೂರು ವಲಯ, ಹುಣಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 4/2007–08, ದಿನಾಂಕ:12.06.08ರಂದು ವಶಪಡಿಸಿಕೊಂಡ ಕೆಎ–45/ಇ–7065 ನೋಂದಣಿ ಸಂಖ್ಯೆಯ ಟಿವಿಎಸ್ ಸ್ಟಾರ್ ಡಿಲಕ್ಸ್ ವಾಹನವನ್ನು ಮತ್ತು 7.920 ಲೀ. ನಕಲಿ ಮದ್ಯವನ್ನು (ಮಾದರಿಯನ್ನು ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.531

ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/315/2007–08, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| ಪಿರ್ಯಾದುದಾರರು | ವಿರುದ್ಧ | ಪ್ರತಿವಾದಿ/ಆರೋಪಿ |
|---|---|---|
| ಅಬಕಾರಿ ಉಪ ನಿರೀಕ್ಷಕರು<br>(ಜಾರಿ & ತನಿಖೆ) ಟಿ.ನರಸೀಪುರ ತಾಲ್ಲೂಕು. | | 1) ಎಂ.ಮಧು ಬಿನ್ ಮರಿಸ್ವಾಮಿ<br>ಆಲ್ಲೂರು ಗ್ರಾಮ, ಚಾಮರಾಜನಗರ ತಾ॥ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:09.02.2008 ರಂದು ಸಂಜೆ 4:30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, (ಜಾರಿ & ತನಿಖೆ) ಟಿ.ನರಸೀಪುರ ತಾಲ್ಲೂಕು, ಇವರು ಟಿ.ನರಸೀಪುರ ತಾಲ್ಲೂಕು, ಟಿ.ನರಸೀಪುರ-ನಂಜನಗೂಡು ರಸ್ತೆ, ಬನ್ನಳ್ಳಿ ಹುಂಡಿ ಗ್ರಾಮದ ಹತ್ತಿರ ಅಕ್ರಮವಾಗಿ 9.000 ಲೀ. ನಕಲಿ ಮದ್ಯವನ್ನು ಕೆಎ-11/ಹೆಚ್-9192 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: 08/2007-08 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11 ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 38(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಆರೋಪಿ ತಲೆ ಮರೆಸಿಕೊಂಡಿರುವುದಾಗಿ ನಮೂದಿಸಿ, ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಮಂಡ್ಯ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:13.03.2008 ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಸದರಿ ವಾಹನದ 'ಬಿ' ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಇದನ್ನು ಪರಿಶೀಲಿಸಲಾಗಿ, ಮರಿಸ್ವಾಮಿ ಬಿನ್ ಲೇ॥ ಕಳಸೇಗೌಡ, ಹನಕೆರೆ ಗ್ರಾಮ, ಮಂಡ್ಯ ತಾಲ್ಲೂಕು / ಜಿಲ್ಲೆ, ಇವರ ಮಾಲೀಕತ್ವದಲ್ಲಿರುವುದು ಕಂಡುಬಂದಿರುತ್ತದೆ. ಈ ಪ್ರಾಧಿಕಾರದಿಂದ ದಿನಾಂಕ: 17.07.2008 ರಂದು ವಾಹನ ಮತ್ತು ನಕಲಿ ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೀಡಲಾಗಿದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:09.02.2008 ರಂದು ಟಿ.ನರಸೀಪುರ ತಾಲ್ಲೂಕು, ಟಿ.ನರಸೀಪುರ-ನಂಜನಗೂಡು ರಸ್ತೆ, ಬನ್ನಳ್ಳಿ ಹುಂಡಿ ಗ್ರಾಮದ ಹತ್ತಿರ ಅಕ್ರಮವಾಗಿ 9.000 ಲೀ. ನಕಲಿ ಮದ್ಯವನ್ನು ಕೆಎ-11/ಹೆಚ್-9192 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದ'ರ್ಭದಲ್ಲಿ ಆರೋಪಿ ತಲೆ ಮರೆಸಿಕೊಂಡಿರುತ್ತಾನೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ / ವಾಹನ ಮಾಲೀಕರಾಗಲೀ ಈ ಪ್ರಾಧಿಕಾರದ ಮುಂದೆ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಪ್ರಥಮ ಮಾಹಿತಿ ವರದಿಯಲ್ಲಿ ಆರೋಪಿಯು ತಲೆ ಮರೆಸಿಕೊಂಡಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (13) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ ನಿರೂಪಿಸಲು ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಮಾರಾಟ ಮತ್ತು ಸಾಗಾಣಿಕೆಯಂತಹ ವ್ಯವಹಾರದಲ್ಲಿ ತೊಡಗಿ, ಇಂತಹ ಮಾದಕ ದ್ರವ್ಯಗಳನ್ನು ಮುಗ್ಧ ಜನರು ಸೇವಿಸಿ, ತಮ್ಮ ಪ್ರಾಣ ಕಳೆದುಕೊಳ್ಳುವುದಲ್ಲದೇ, ಸಮಾಜದ ಮೇಲೆ ದುಷ್ಪರಿಣಾಮ ಉಂಟಾಗುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಇದು ಅಲ್ಲದೇ ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟು ಮಾಡುತ್ತಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (13) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನ ವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಾಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/315/2007–08, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ಉಪ ನಿರೀಕ್ಷಕರು, ಟಿ.ನರಸೀಪುರ ವಲಯ, ಟಿ.ನರಸೀಪುರ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 08/2007–08, ದಿನಾಂಕ:09.02.08ರಂದು ವಶಪಡಿಸಿಕೊಂಡ ಕೆಎ–11/ಹೆಚ್–9192 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನವನ್ನು ಮತ್ತು 9.000 ಲೀ. ನಕಲಿ ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.535

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/288/2007–08, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಬನ್ನೂರು ಪೋಲೀಸ್ ಠಾಣೆ, ಟಿ.ನರಸೀಪುರ ತಾಲ್ಲೂಕು | | 1) ಆರೋಪಿಗಳು ಪರಾರಿಯಾಗಿರುತ್ತಾರೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:15.01.08ರಂದು ರಾತ್ರಿ 2:00 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಬನ್ನೂರು ಪೋಲೀಸ್ ಠಾಣೆ, ಟಿ.ನರಸೀಪುರ ಇವರು ಟಿ.ನರಸೀಪುರ ತಾ:, ಬನ್ನೂರು–ಟಿ.ನರಸೀಪುರ ಮುಖ್ಯ ರಸ್ತೆಯ ಜಗಜೀವನ ಗ್ರಾಮದಲ್ಲಿರುವ 3ನೇ ಬೀದಿಯ ಆರೋಪಿಯಾದ ರಂಗಸ್ವಾಮಿ ಬಿನ್ ದಾಸಯ್ಯ ಎಂಬುವರ ಮನೆಯ ಮುಂದೆ ಅಕ್ರಮವಾಗಿ 34.560 ಲೀ. ನಕಲಿ ಮದ್ಯವನ್ನು ಕೆಎ–01/ಎಂಬಿ–4109 ನೋಂದಣಿ ಸಂಖ್ಯೆಯ ಮಾರುತಿ ಓಮ್ನಿ ವ್ಯಾನ್‌ನಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ : 08/2008ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಆರೋಪಿಗಳು ತಲೆ ಮರೆಸಿಕೊಂಡಿರುವುದಾಗಿ ನಮೂದಿಸಿ, ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ದಿನಾಂಕ:18.01.08ರಂದು ವರದಿಯೊಂದನ್ನು ಸಲ್ಲಿಸಿ, ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ಅದೇ ದಿನ ಟಿ.ನರಸೀಪುರ ವಲಯ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ಈ ಪ್ರಕರಣದ ಆರೋಪಿಯಾದ ರಂಗಸ್ವಾಮಿ ಇವರಿಗೆ ಈ ಪ್ರಾಧಿಕಾರದ ದಿನಾಂಕ:31.01.2008 ರಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೀಡಲಾಗಿದ್ದು, ಸದರಿ ನೋಟೀಸ್ ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ ಬೆಂಗಳೂರು ಕೇಂದ್ರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:31.01.2008 ರಂದು ಪತ್ರ ಬರೆಯಲಾಗಿರುತ್ತದೆ. ಇದಕ್ಕೆ ಯಾವುದೇ ಪ್ರತಿಕ್ರಿಯೆ ಇಲ್ಲದ ಕಾರಣ, ಟಿ.ನರಸೀಪುರ ವಲಯದ ನಿರೀಕ್ಷಕರಿಗೆ ಪತ್ರ ಬರೆದು, 'ಬಿ' ವಹಿಯನ್ನು ಪಡೆದು ಸಲ್ಲಿಸುವಂತೆ, ದಿನಾಂಕ: 19.07.2008 ಮತ್ತು 05.11.2008 ರಂದು ಪತ್ರ ಬರೆಯಲಾಗಿದೆ.

ಕಡತ ಪರಿಶೀಲಿಸಲಾಯಿತು. ಕೆಳಕಂಡ ದಾಖಲಾತಿಗಳು ಕಂಡುಬಂದಿರುತ್ತವೆ.

1) ಮಹಜರ್ ಕ್ರಮ.

2) ಸ್ವತ್ತಿನ ಪಟ್ಟಿ.

3) ಪ್ರಥಮ ಮಾಹಿತಿ ವರದಿ.

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:15.01.2008ರಂದು ಟಿ.ನರಸೀಪುರ ತಾ: ಬನ್ನೂರು–ಟಿ.ನರಸೀಪುರ ಮುಖ್ಯ ರಸ್ತೆಯ ಜಗಜೀವನ ಗ್ರಾಮದಲ್ಲಿರುವ 3ನೇ ಬೀದಿಯ ಆರೋಪಿಯಾದ ರಂಗಸ್ವಾಮಿ ಬಿನ್ ದಾಸಯ್ಯ

ಎಂಬುವರ ಮನೆಯ ಮುಂದೆ ಅಕ್ರಮವಾಗಿ 34.560 ಲೀಟರ್ ನಕಲಿ ಮದ್ಯವನ್ನು ಕೆಎ–01/ಎಂಬಿ–4109 ನೋಂದಣಿ ಸಂಖ್ಯೆಯ ಮಾರುತಿ ಓಮ್ನಿ ವ್ಯಾನ್ ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂಧರ್ಭದಲ್ಲಿ ಆರೋಪಿಗಳು ತಲೆ ಮರೆಸಿಕೊಂಡಿರುತ್ತಾನೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ / ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಪ್ರಥಮ ಮಾಹಿತಿ ವರದಿಯಲ್ಲಿ ಆರೋಪಿಗಳು ತಲೆ ಮರೆಸಿಕೊಂಡಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (15) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ ನಿರೂಪಿಸಲು ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಮಾರಾಟ ಮತ್ತು ಸಾಗಾಣಿಕೆಯಂತಹ ವ್ಯವಹಾರದಲ್ಲಿ ತೊಡಗಿ, ಇಂತಹ ಮಾದಕ ದ್ರವ್ಯಗಳನ್ನು ಮುಗ್ಧ ಜನರು ಸೇವಿಸಿ, ತಮ್ಮ ಪ್ರಾಣ ಕಳೆದುಕೊಳ್ಳುವುದಲ್ಲದೇ, ಸಮಾಜದ ಮೇಲೆ ದುಷ್ಪರಿಣಾಮ ಉಂಟಾಗುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಇದು ಅಲ್ಲದೇ ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟು ಮಾಡುತ್ತಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (15) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನ ವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಾಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/288/2007–08, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಬನ್ನೂರು ಪೋಲೀಸ್ ಠಾಣೆ, ಟಿ.ನರಸೀಪುರ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 08/2007–08, ದಿನಾಂಕ:15.01.08 ರಂದು ವಶಪಡಿಸಿಕೊಂಡ ಕೆಎ–01/ಎಂಬಿ–4109 ನೋಂದಣಿ ಸಂಖ್ಯೆಯ ಮಾರುತಿ ಓಮ್ನಿ ವ್ಯಾನ್ ವಾಹನವನ್ನು (34.560 ಲೀ. ನಕಲಿ ಮದ್ಯವನ್ನು ಮಾದರಿ ಹೊರತುಪಡಿಸಿ ಈಗಾಗಲೇ ದಿನಾಂಕ:06.02.08 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.541

ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/48/2008–09, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ಹುಣಸೂರು ವಲಯ, ಹುಣಸೂರು. | | 1) ಡಿ. ಚೆನ್ನಸ್ವಾಮಿ ಬಿನ್ ಲೇಟ್ ಪಳನಿಸ್ವಾಮಿ ಗೌಂಡರ್ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:19.08.2008ರಂದು ಬೆಳಿಗ್ಗೆ 8:00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಹುಣಸೂರು ವಲಯ ಇವರು ಹೆಚ್.ಡಿ.ಕೋಟೆ ತಾಲ್ಲೂಕು, ಹ್ಯಾಂಡ್‌ಪೋಸ್ಟ್‌ನಿಂದ ಹೆಚ್.ಡಿ.ಕೋಟೆಗೆ ಹೋಗುವ ಅರಣ್ಯ ವಿಶ್ರಾಂತಿ ಗೃಹದ ಮುಂಭಾಗದ ರಸ್ತೆಯ ಬದಿಯಲ್ಲಿ ಅಕ್ರಮವಾಗಿ ಟಿಎನ್–36/ಸಿ–898 ನೋಂದಣಿ ಸಂಖ್ಯೆಯ ಟಿ.ವಿ.ಎಸ್–50 ಯಲ್ಲಿ 35 ಲೀ. ಸೇಂದಿಯನ್ನು ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: 02/2008–09ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 38(ಎ) ಹಾಗೂ 43(ಎ)ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಡಿ. ಚೆನ್ನಸ್ವಾಮಿ ಬಿನ್ ಲೇಟ್ ಪಳನಿಸ್ವಾಮಿ ಎಂಬ ಆರೋಪಿಯನ್ನು ಬಂಧಿಸಿ, ನ್ಯಾಯಾಲಯದ ವಶಕ್ಕೆ ಒಪ್ಪಿಸಿರುವುದಾಗಿ ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಚೆನ್ನೈನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:27.11.2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದ್ದು, ಅದರಂತೆ 'ಬಿ' ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಎಸ್. ವೇಲು ಬಿನ್ ಸೀರಂಗನ್, ಓಲೇಯೂರು, ಗುರವರೆಡ್ಡಿಯೂರು ಅಂಚೆ, ಇಳುಪಿಲಿ, ಭವಾನಿ–ಇವರ ಒಡೆತನದಲ್ಲಿದ್ದು, ಸದರಿ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿನಾಂಕ: 23.03.2009ರಂದು ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಸದರಿ ನೋಟೀಸ್ ಸಂಬಂಧಪಟ್ಟವರಿಗೆ ದಿನಾಂಕ:03.04.2009ರಂದು ಜಾರಿಯಾಗಿ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುತ್ತದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:19.08.2008ರಂದು ಹೆಚ್.ಡಿ.ಕೋಟೆ ತಾಲ್ಲೂಕು, ಹ್ಯಾಂಡ್‌ಪೋಸ್ಟ್‌ನಿಂದ ಹೆಚ್.ಡಿ.ಕೋಟೆಗೆ ಹೋಗುವ ಅರಣ್ಯ ವಿಶ್ರಾಂತಿ ಗೃಹದ ಮುಂಭಾಗದ ರಸ್ತೆಯ ಬದಿಯಲ್ಲಿ ಅಕ್ರಮವಾಗಿ ಟಿಎನ್–36/ಸಿ–0898 ನೋಂದಣಿ ಸಂಖ್ಯೆಯ ಟಿ.ವಿ.ಎಸ್–50 ಯಲ್ಲಿ 35 ಲೀ. ಸೇಂದಿಯನ್ನು ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ಡಿ. ಚೆನ್ನಸ್ವಾಮಿ ಬಿನ್ ಲೇಟ್ ಪಳನಿಸ್ವಾಮಿ ಗೌಂಡರ್ ಇವರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ / ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಹಾಜರಾಗಿ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 10 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನ ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/48/2008–09, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಹುಣಸೂರು ವಲಯ, ಹುಣಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:02/2008–09, ದಿನಾಂಕ:19.08.2008ರಂದು ವಶಪಡಿಸಿಕೊಂಡ ಟಿಎನ್–36/ಸಿ–898 ನೋಂದಣಿ ಸಂಖ್ಯೆಯ ಟಿ.ವಿ.ಎಸ್–50 ಮತ್ತು 35 ಲೀ. ಸೇಂದಿಯನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ|| ವೈ.ಮಂಜುನಾಥ್**

ಪಿ.ಆರ್.552

ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/454/2007–08, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಲಷ್ಕರ್ ಪೋಲೀಸ್ ಠಾಣೆ, ಮೈಸೂರು. | | 1) ತಲೆ ತಪ್ಪಿಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:30.04.2008ರಂದು ರಾತ್ರಿ 11:40 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಮೈಸೂರು ಲಷ್ಕರ ಪೋಲೀಸ್ ಠಾಣೆ ಇವರು ಮೈಸೂರು ನಗರದ ಲಷ್ಕರ್ ಪೋಲೀಸ್ ಠಾಣಾ ವ್ಯಾಪ್ತಿಯ ಫೈವ್ ಲೈಟ್ ಸರ್ಕಲ್‌ನ ಕಾವೇರಿ ಪ್ಯಾಲೇಸ್ ಲಾಡ್ಜ್‌ನ ಮುಂಭಾಗದಲ್ಲಿ ಗಸ್ತು ಮಾಡುತ್ತಿರುವಾಗ ಫೌಂಟೇನ್ ವೃತ್ತದ ಕಡೆಯಿಂದ ಒಂದು ಬಿಳಿ ಬಣ್ಣದ ಮಾರುತಿ–800 ಕಾರನ್ನು ಕಂಡು ತಪಾಸಣೆಗೊಳಪಡಿಸಲು ತಡೆದು ನಿಲ್ಲಿಸಿ ಪರಿಶೀಲಿಸಿದಾಗ ಅದರಲ್ಲಿ ಅಕ್ರಮವಾಗಿ 450 ಲೀ. ಮದ್ಯಸಾರವನ್ನು ಯಾವುದೇ ರಹದಾರಿ ಇಲ್ಲದೆ ಹೊಂದಿದ್ದು ಕಂಡು ಬಂದ ಕಾರಣ ಅರೋಪಿಗಳು ಪರಾರಿಯಾಗಿದ್ದು ಸಿಕೆಕ್ಯೂ–1665 ನೋಂದಣಿ ಸಂಖ್ಯೆಯ ಮಾರುತಿ–800 ವಾಹನ ಮತ್ತು ಮದ್ಯಸಾರವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:63/2007 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲ 34 ರ ರೀತ್ಯಾ ಅಪರಾಧವಾಗಿದ್ದು, ಸಂಬಂಧಪಟ್ಟ ದಾಖಲೆಗಳೊಂದಿಗೆ ದಿನಾಂಕ:12.05.2008 ರಂದು ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿ ಜಪ್ತುಗೊಳಿಸಿ ವಾಹನ್ ಮತ್ತು ಮಾದಕ ದ್ರವ್ಯಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:13.05.2008 ರಂದು ಮೈಸೂರು ವಲಯ–1ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಬೆಂಗಳೂರು ಕೇಂದ್ರ ಪಶ್ಚಿಮ ಇವರಿಗೆ ದಿನಾಂಕ:21.07.2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದ್ದು ಅಂತೆಯೆ 'ಬಿ' ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಇದನ್ನು ಪರಿಶೀಲಿಸಲಾಗಿ ಗೀತಾ ರಾಮದಾಸ್ ಕೋಂ ರಾಮದಾಸ್ ಸೇತ್ ಹೆಚ್. ನಂ.277, 5ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು ಇವರ ಒಡೆತನದಲ್ಲಿದ್ದು ಸದರಿ ವಾಹನ ಮಾಲೀಕರಿಗೆ ಕಲಂ 43 (ಬಿ) ರಆಡಿಯಲ್ಲಿ ದಿನಾಂಕ:05.11.2008 ರಂದು ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸ'ಲಾಗಿದ್ದು, ವಿಳಾಸದಾರರು ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಸದರಿ ನೋಟೀಸನ್ನು ಹಿಂತಿರುಗಿಸಿರುತ್ತಾರೆ.

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:30.04.2008 ರಂದು ಮೈಸೂರು ಸೆಂಟ್ ಫಿಲೋಮಿನಾ ಚರ್ಚ್‌ನ ಫೈವ್ ಲೈಟ್ ವೃತ್ತ, ಕಾವೇರಿ ಪ್ಯಾಲೇಸ್ ಲಾಡ್ಜ್ ಮುಂಭಾಗದಲ್ಲಿ ಅಕ್ರಮವಾಗಿ 450 ಲೀ. ಮದ್ಯಸಾರವನ್ನು ಸಿಕೆಕ್ಯೂ–1665 ನೋಂದಣಿ ಸಂಖ್ಯೆಯ ಮಾರುತಿ–800 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ತಲೆ ಮರೆಸಿಕೊಂಡಿರುತ್ತಾನೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ / ವಾಹನ ಮಾಲೀಕರಾಗಲೀ ಈ ಪ್ರಾಧಿಕಾರದ ಮುಂದೆ ತಮ್ಮ ನಿಲುವು ಏನೆಂಬುದನ್ನು ಮತ್ತು ತಮ್ಮ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಪ್ರಥಮ ಮಾಹಿತಿ ವರದಿಯಲ್ಲಿ ಆರೋಪಿಯು ತಲೆ ಮರೆಸಿಕೊಂಡಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (12) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ ನಿರೂಪಿಸಲು ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (12) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ /

ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/454/2007–08, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಲಷ್ಕರ್, ಪೋಲೀಸ್ ಠಾಣೆ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 63/2007–08, ದಿನಾಂಕ:30.04.08 ರಂದು ವಶಪಡಿಸಿಕೊಂಡ ಸಿಕೆಕ್ಯೂ–1665 ನೋಂದಣಿ ಸಂಖ್ಯೆಯ ಮಾರುತಿ–800 ವಾಹನವನ್ನು ಮತ್ತು 450 ಲೀ. ಮದ್ಯಸಾರವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.554

ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/410/2007–08, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಅಬ್ಕಾರಿ ಉಪ ನಿರೀಕ್ಷಕರು, ತಿ.ನರಸೀಪುರ ವಲಯ, ತಿ.ನರಸೀಪುರ | | 1) ಮಧು ಬಿನ್ ಮಹದೇವಯ್ಯ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:04.05.2008 ರಂದು ಬೆಳಿಗ್ಗೆ 08:00 ಗಂಟೆ ಸಮಯದಲ್ಲಿ ಅಬ್ಕಾರಿ ಉಪ ನಿರೀಕ್ಷಕರು–1, ತಿ.ನರಸೀಪುರ ವಲಯ, ಇವರು ತಿ.ನರಸೀಪುರ ತಾಲ್ಲೂಕು, ನೆರೆಕ್ಯಾತನಹಳ್ಳಿ ಕಾಲುವೆ ರಸ್ತೆಯ ಹತ್ತಿರ ಅಕ್ರಮವಾಗಿ **35** ಲೀ. **ಸೇಂದಿಯನ್ನು** ಒಂದು **ಅಟ್ಲಾಸ್ ಸೈಕಲ್‌ನಲ್ಲಿ** ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ಸೈಕಲ್ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: **25/2007–08** ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13(1)(ಸಿ) ಮತ್ತು 1991ರ 22, 23ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 34, ಮತ್ತು 43ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಆರೋಪಿಯನ್ನು ದಸ್ತಗಿರಿಗೊಳಿಸಿ, ನ್ಯಾಯಾಂಗ ಬಂಧನಕ್ಕೆ ಹಾಜರುಪಡಿಸಿರುವುದಾಗಿ ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಸೇಂದಿಯ ದ್ರವಣವನ್ನು ಬೆಂಗಳೂರಿನ ಮುಖ್ಯ ರಾಸಾಯನಿಕ ತಜ್ಞರಿಗೆ ಕಳುಹಿಸಿ, ತಮ್ಮ ವರದಿ ದಿನಾಂಕ:13.06.08 ರಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಅವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (10) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ಸೈಕಲ್ ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರು ಇಂದಿನ ವರೆವಿಗೂ ಮಾಲೀಕತ್ವ ನಿರೂಪಿಸಿರುವುದಿಲ್ಲ. ಸೈಕಲ್‌ನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/410/2008–09, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ಉಪ ನಿರೀಕ್ಷಕರು, ತಿ.ನರಸೀಪುರ ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 25/2007–08, ದಿನಾಂಕ: 04.05.08 ರಂದು ವಶಪಡಿಸಿಕೊಂಡ ಸೈಕಲ್ ಮತ್ತು ಸೇಂದಿಯನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಸೇಂದಿಯನ್ನು ನಾಶಪಡಿಸಲು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.555 ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/442/2007–08, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ಮೈಸೂರು ವಲಯ ಸಂ–1, ಮೈಸೂರು. | | 1) ನಾಗರಾಜು ಬಿನ್ ಲೇಟ್ ಮಾದಪ್ಪ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:21.05.2008ರಂದು ಮಧ್ಯಾಹ್ನ 1–30 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಮೈಸೂರು ವಲಯ ಸಂ–1 ಇವರು ಮೈಸೂರು ತಾಲ್ಲೂಕು, ವರುಣಾ ಹೋಬಳಿ, ಭುಗತಗಳ್ಳಿ ಗ್ರಾಮದ ಲಕ್ಷ್ಮೀನರಸಿಂಹ ಫಾರಂನಲ್ಲಿ, ಅಕ್ರಮವಾಗಿ 2950 ಲೀ. ಮದ್ಯಸಾರ, ಭದ್ರತಾ ಚೀಟಿಗಳು, ಖಾಲಿ ಪ್ಲಾಸ್ಟಿಕ್ ಕ್ಯಾನ್‌ಗಳು, ½ ಹೆಚ್. ಪಿ. ಮೋಟಾರ್‌ಗಳು, 3 ಸಿಂಟೆಕ್ಸ್ ಟ್ಯಾಂಕ್‌ಗಳು ಮತ್ತು ಇವುಗಳನ್ನು ಸಾಗಾಣಿಕೆ ಮಾಡಲು ಕೆಎ–11/ಎಸ್–499 ನೋಂದಣಿ ಸಂಖ್ಯೆಯ ಅಪಾಚಿ ಬೈಕ್ ವಾಹನವನ್ನು ಉಪಯೋಗಿಸುತ್ತಿದ್ದ ಮತ್ತು ದಾಸ್ತಾನು ಮಾಡಿದ್ದ ಆರೋಪಕ್ಕಾಗಿ ವಾಹನ, ಮಾದಕ ದ್ರವ್ಯ ಮತ್ತು ಇತರೆ ವಸ್ತುಗಳನ್ನು ಜಪ್ತು ಮಾಡಿ, ಪ್ರಕರಣ ಸಂಖ್ಯೆ:10/2007–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 13(ಎ),(ಇ) (ಎಫ್) 14ರ ರೀತ್ಯ ಅಪರಾಧವಾಗಿದ್ದು, ಕಲಂ 32, 34, 38(ಎ) ಹಾಗೂ 43ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಗಾಗಿ ಮಂಡ್ಯ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:15.07.2008ರಂದು ಪತ್ರ ಬರೆಯಲಾಗಿದೆ. ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ ದಿನಾಂಕ:05.11.2008ರಂದು ಮತ್ತೊಮ್ಮೆ ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ಅದರಂತೆ 'ಬಿ' ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಜಿ.ಎಂ. ಪ್ರಕಾಶ್ ಬಿನ್ ಮಹಾಲಿಂಗ, ನಂ.220, ಗಂಜಾಂ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಇವರ ಒಡೆತನದಲ್ಲಿದ್ದು, ಸದರಿ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿ: 06.12.2008 ರಂದು ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ. ಮೈಸೂರು ವಲಯ ಸಂ–1ರ ಅಬಕಾರಿ ಉಪ ನಿರೀಕ್ಷಕರು ಜಿ.ಎಂ. ಪ್ರಕಾಶ್‌ರವರ ಕುಟುಂಬದವರಿಗೆ ನೋಟಿಸನ್ನು ಜಾರಿ ಮಾಡಿ, ದಿನಾಂಕ:03.09.2009ರಂದು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಕಡತ ಪರಿಶೀಲಿಸಲಾಯಿತು. ದಿನಾಂಕ: 21–05–08 ರಂದು ಮೈಸೂರು ತಾಲ್ಲೂಕು, ವರುಣಾ ಹೋಬಳಿ, ಭುಗತಗಳ್ಳಿ ಗ್ರಾಮದ ಲಕ್ಷ್ಮೀನರಸಿಂಹ ಫಾರಂನಲ್ಲಿ, ಅಕ್ರಮವಾಗಿ 2950 ಲೀ. ಮದ್ಯಸಾರ, ಭದ್ರತಾ ಚೀಟಿಗಳು, ಖಾಲಿ ಪ್ಲಾಸ್ಟಿಕ್ ಕ್ಯಾನ್‌ಗಳು, ½ ಹೆಚ್. ಪಿ. ಮೋಟಾರ್‌ಗಳು, 3 ಸಿಂಟೆಕ್ಸ್ ಟ್ಯಾಂಕ್‌ಗಳು ಮತ್ತು ಇವುಗಳನ್ನು ಸಾಗಾಣಿಕೆ ಮಾಡಲು ಕೆಎ–11/ಎಸ್–499 ನೋಂದಣಿ ಸಂಖ್ಯೆಯ ಅಪಾಚಿ ಬೈಕ್ ವಾಹನವನ್ನು ಉಪಯೋಗಿಸುತ್ತಿದ್ದ ಮತ್ತು ದಾಸ್ತಾನು ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂಧರ್ಭದಲ್ಲಿ ಆರೋಪಿಯಾದ ನಾಗರಾಜು ಬಿನ್ ಮಾದಪ್ಪ ಇವರನ್ನು ದಸ್ತಗಿರಿ ಮಾಡಲಾಗಿರುತ್ತದೆ. ಅಲ್ಲದೇ ಈ ಪ್ರಕರಣದಲ್ಲಿ ಜಿ.ಎಂ. ಪ್ರಕಾಶ್ ಎಂಬುವರನ್ನು ಆರೋಪಿ–2 ಆಗಿದ್ದು, ಸದರಿ ದಿನಾಂಕದಂದು ಪರಾರಿಯಾಗಿರುವುದಾಗಿ ಪ್ರ.ಮಾ. ವರದಿಯಲ್ಲಿ ನಮೂದಿಸಲಾಗಿರುತ್ತದೆ. ಆದ ಕಾರಣ ಇವರ ತಿಳುವಳಿಕೆಯಲ್ಲೇ ಈ ಕೃತ್ಯ ನಡೆದಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಸದರಿ ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಹಾಜರಾಗಿ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (12) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/442/2007–08, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳೆನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ಮೈಸೂರು ವಲಯ ಸಂ–1 ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:10/2007–08, ದಿನಾಂಕ:21.05.2008 ರಂದು ವಶಪಡಿಸಿಕೊಂಡ ಕೆಎ–11/ಎಸ್–499 ನೋಂದಣಿ ಸಂಖ್ಯೆಯ ಅಪಾಚಿ ಬೈಕ್ ವಾಹನ, 2905 ಲೀ. ಮದ್ಯಸಾರ ಮತ್ತು ಇತರೆ ವಸ್ತುಗಳನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.564

ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/385/2008–09, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಉದಯಗಿರಿ ಪೋಲಿಸ್ ಠಾಣೆ, ಮೈಸೂರು. | | 1) ಶ್ರೀನಿವಾಸ್ ಅಲಿಯಾಸ್ ಗಣೇಶ್‌ನಗರದ ಸೀನ ಬಿನ್ ಪುಟ್ಟಸ್ವಾಮಿ, |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:23.01.2009 ರಂದು ಬೆಳಿಗ್ಗೆ 7:15 ಗಂಟೆ ಸಮಯದಲ್ಲಿ ಅರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ ವಿಭಾಗ ಇವರು ಮೈಸೂರು ನಗರದ ಉದಯಗಿರಿ ಪೋಲೀಸ್ ಠಾಣಾ ವ್ಯಾಪ್ತಿಗೆ ಸೇರಿದ ರಾಜೀವ್‌ನಗರ 2ನೇ ಹಂತ, ಮುಖ್ಯ ರಸ್ತೆ ಕೆಂಚಪ್ಪನ ತೋಟದ ಅರಳಿಮರದ ಕ್ರಾಸ್ ಬಳಿ ಕೆಎಲ್–12/8619 ನೋಂದಣಿ ಸಂಖ್ಯೆಯ ಆಟೋ ರಿಕ್ಷಾ ವಾಹನವನ್ನು ಚಾಲನೆ ಮಾಡಿಕೊಂಡು ಬರುತ್ತಿದ್ದುದ್ದನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ ಅಕ್ರಮವಾಗಿ 43.200 ಲೀ. ನಕಲಿ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ಮಹಜರ್ ಕ್ರಮದೊಂದಿಗೆ ಜಪ್ತುಗೊಳಿಸಿ, ಆರೋಪಿತರನ್ನು ಮತ್ತು ಮಾಲುಗಳನ್ನು ಮುಂದಿನ ಕ್ರಮ ಕೈಗೊಳ್ಳುವಂತೆ ಕೋರಿ ಹಸ್ತಾಂತರಿಸಿರುತ್ತಾರೆ. ಅದರಂತೆ ಉದಯಗಿರಿ ಪೋಲಿಸ್ ಠಾಣೆಯ ಅರಕ್ಷಕ ಉಪ ನಿರೀಕ್ಷಕರು ಪ್ರಥಮ ಮಾಹಿತಿ ವರದಿ ಸಂಖ್ಯೆ: 12/2009 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲ 11, 13, 32, 34 ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ ದಿನಾಂಕ:28.01.2009 ರಂದು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವರದಿಯನ್ನು ಸಲ್ಲಿಸಿ ಅಬಕಾರಿ ಇಲಾಖೆಗೆ ವಾಹನ ಮತ್ತು ಮಾದಕ ದ್ರವ್ಯಗಳನ್ನು ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:31.01.2009 ರಂದು ಮೈಸೂರು ವಲಯ –1 ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಯಿತು.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಕೇರಳ ರಾಜ್ಯದ ಎರ್ನಾಕುಲಂ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಆಯುಕ್ತರಿಗೆ ದಿನಾಂಕ:12.02.2009 ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಅದಕ್ಕೆ

ಪ್ರತಿಕ್ರಿಯಿಸಿ, 'ಬಿ' ವಹಿಯ ಪ್ರತಿಯನ್ನು ಕಳುಹಿಸಿರುತ್ತಾರೆ. ಇದನ್ನು ಪರಿಶೀಲಿಸಲಾಗಿ, ಎಂ.ಕೆ. ಸಲೀಂ, ರಾಜೀನಮಂಜಿಲ್, ಕರಿಯಂಬಾಡಿ, ವೈನಾಡು ಜಿಲ್ಲೆ, ಕೇರಳ ರಾಜ್ಯ ಮತ್ತು ಪತ್ತುಮ್ಮ, ಚೆರವನ್‌ತೋಡಿ ಹೌಸ್, ಕರಾನಿ ಅಂಚೆ, ಕನಿಯಂಬೆಟ್ಟ , ವೈನಾಡು ಜಿಲ್ಲೆ ಇವರ ಒಡೆತನದಲ್ಲಿರುವುದು ದೃಢಪಟ್ಟಿರುತ್ತದೆ. ಸದರಿ ಮಾಲೀಕರಿಗೆ ಕಲಂ 43(ಬಿ)ರ ಅಡಿಯಲ್ಲಿ ಈ ಪ್ರಾಧಿಕಾರದಿಂದ ದಿನಾಂಕ:23.03.2009 ರಂದು ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಲಾಗಿದ್ದು, ಪತ್ತುಮ್ಮ ಇವರಿಗೆ ಜಾರಿಯಾಗಿ ದಿನಾಂಕ:21.04.2009 ರಂದು ಸ್ವೀಕೃತಿಯು ಸ್ವೀಕೃತವಾಗಿರುತ್ತದೆ. ಎಂ.ಕೆ.ಸಲೀಂ–ವಿಳಾಸದಾರರು ಊರಿನಲ್ಲಿ ಇಲ್ಲವೆಂದು ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:23.01.2009 ರಂದು ಮೈಸೂರು ನಗರದ ಉದಯಗಿರಿ ಪೋಲೀಸ್ ಠಾಣಾ ವ್ಯಾಪ್ತಿಗೆ ಸೇರಿದ ರಾಜೀವ್‌ನಗರ 2ನೇ ಹಂತ, ಮುಖ್ಯ ರಸ್ತೆ ಕೆಂಚಪ್ಪನ ತೋಟದ ಅರಳಿಮರದ ಕ್ರಾಸ್ ಬಳಿ ಕೆಎಲ್–12/8619 ನೋಂದಣಿ ಸಂಖ್ಯೆಯ ಆಟೋ ರಿಕ್ಷಾ ವಾಹನವನ್ನು ಚಾಲನೆ ಮಾಡಿಕೊಂಡು ಬರುತ್ತಿದ್ದುದ್ದನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ ಅಕ್ರಮವಾಗಿ 43.200 ಲೀ. ನಕಲಿ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಶ್ರೀನಿವಾಸ್ ಅಲಿಯಾಸ್ ಗಣೇಶ್‌ನಗರದ ಸೀನ ಬಿನ್ ಪುಟ್ಟಸ್ವಾಮಿ , ನಂ.6, ಶನೇಶ್ವರ ಬಡಾವಣೆ, ಎನ್.ಆರ್.ಮೊಹಲ್ಲಾ ಮೈಸೂರು ಇವರನ್ನು ದಸ್ತಗಿರಿಗೊಳಿಸಲಾಗಿದ್ದು, ಸದರಿ ಆರೋಪಿಯಾಗಲೀ / ವಾಹನ ಮಾಲೀಕರಾಗಲೀ ಈ ಪ್ರಾಧಿಕಾರದ ಮುಂದೆ ತಮ್ಮ ನಿಲುವು ಏನೆಂಬುದನ್ನು ಮತ್ತು ತಮ್ಮ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (14) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನ ವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಾಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/385/2008–09, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳೆನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅರಕ್ಷಕ ಉಪ ನಿರೀಕ್ಷಕರು, ಉದಯಗಿರಿ ಪೋಲಿಸ್ ಠಾಣೆ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 12/2009, ದಿನಾಂಕ:23.01.09 ರಂದು ವಶಪಡಿಸಿಕೊಂಡ ಕೆಎಲ್–12/8619 ನೋಂದಣಿ ಸಂಖ್ಯೆಯ ಆಟೋರಿಕ್ಷಾ ವಾಹನ, 43.200 ಲೀ. ನಕಲಿ ಮದ್ಯ ಮತು ಇತರೆ ವಸ್ತುಗಳನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.565

ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/316/2007–08, ದಿನಾಂಕ:4ನೇ ಜೂನ್, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು. | | ಶ್ರೀಕಂಠ ಬಿನ್ ನಾರಾಯಣಗೌಡ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:21.04.2008 ರಂದು ಬೆಳಗಿನ ಜಾವ 02:00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ನಂಜನಗೂಡು ತಾಲ್ಲೂಕು, ಬಲಿಗೆರೆ ಹೋಬಳಿ, ಸುತ್ತೂರು ಗ್ರಾಮದ ಶ್ರೀಕಂಠ ಎಂಬುವವರ ಮನೆಯ ಮುಂಭಾಗದಲ್ಲಿ ಕೆಎ–55/178 ನೋಂದಣಿ ಸಂಖ್ಯೆಯ ಗೂಡ್ಸ್ ಆಟೋ ವಾಹನದಲ್ಲಿ ಅಕ್ರಮವಾಗಿ 86.400 ಲೀ. ನಕಲಿಯಂತೆ ಇರುವ ಮದ್ಯವನ್ನು ಹೊಂದಿ, ದಾಸ್ತಾನು ಮಾಡಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: 19/2007–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13(1)(ಎ)(ಎಫ್), 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 34, 38(ಎ) ಮತ್ತು 43(ಎ)ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಶ್ರೀಕಂಠ ಬಿನ್ ನಾರಾಯಣಗೌಡ ಎಂಬ ಆರೋಪಿಯನ್ನು ಬಂಧಿಸಿ, ನ್ಯಾಯಾಲಯದ ವಶಕ್ಕೆ ಒಪ್ಪಿಸಿರುವುದಾಗಿ ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:28.07.2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಯಾರಿಂದ ವಾಹನವನ್ನು ವಶಪಡಿಸಿಕೊಳ್ಳಲಾಗಿತ್ತೋ ಅವರಿಗೆ (ಶ್ರೀಕಂಠ ಬಿನ್ ನಾರಾಯಣಗೌಡ) ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳಿ ನೋಟೀಸ್‌ನ್ನು ಈ ಪ್ರಾಧಿಕಾರದಿಂದ ದಿನಾಂಕ:10.07.08ರಂದು ನೀಡಲಾಗಿದ್ದು, ಸದರಿ ನೋಟೀಸ್ ಜಾರಿಯಾಗಿ, ಸ್ವೀಕೃತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಶ್ರೀಕಂಠ ಇವರು ಲಿಖಿತ ಮೂಲಕ ಮನವಿಯನ್ನು ಸಲ್ಲಿಸಿ, ಈ ಪ್ರಕರಣದಲ್ಲಿ ಎಸಗಿರುವ ತಪ್ಪನ್ನು ಮನ್ನಿಸಿ, ಪ್ರಾಧಿಕಾರವು ವಿಧಿಸುವ ಮೌಲ್ಯವನ್ನು ಸರ್ಕಾರಕ್ಕೆ ಸಂದಾಯ ಮಾಡಲು ಬದ್ಧನಾಗಿರುವುದಾಗಿ ಒಪ್ಪಿ, ವಾಹನವನ್ನು ತನ್ನ ವಶಕ್ಕೆ ಬಿಡುಗಡೆ ಮಾಡಿಕೊಡಲು ಕೋರಿರುತ್ತಾರೆ. ಸಾರಿಗೆ ಪ್ರಾಧಿಕಾರದಿಂದ ಮೇಲೆ ಬರೆಯಲಾದ ಪತ್ರಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ ದಿನಾಂಕ:05.11.2008 ರಂದು ಮತ್ತೊಮ್ಮೆ ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು, ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ 'ಬಿ' ವಹಿಯ ಪ್ರತಿಯನ್ನು ಪಡೆದು, ದಿನಾಂಕ:20.11.2008ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಇದನ್ನು ನೋಡಲಾಗಿ, ಶ್ರೀಕಂಠ ಬಿನ್ ರಾಮೇಗೌಡ, ಸುತ್ತೂರು ಗ್ರಾಮ, ಬಲಿಗೆರೆ ಹೋಬಳಿ, ನಂಜನಗೂಡು ತಾಲ್ಲೂಕು ಇವರ ಒಡತನದಲ್ಲಿದ್ದು, ಸದರಿಯವರಿಗೆ ದಿನಾಂಕ:29.11.2008 ರಂದು ಕಲಂ 43(ಬಿ)ರ ಅಡಿಯಲ್ಲಿ ಈ ಪ್ರಾಧಿಕಾರದಿಂದ ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಲಾಗಿದ್ದು, ದಿನಾಂಕ:18.01.2009 ರಂದು ಮಾಲೀಕರಿಗೆ ಜಾರಿಗೊಳಿಸಿ, ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು, ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಮಾದಕ ದ್ರವ್ಯಗಳನ್ನು ಬೆಂಗಳೂರಿನ ಮುಖ್ಯ ರಾಸಾಯನಿಕ ತಜ್ಞರಿಗೆ ಕಳುಹಿಸಿ, ತಮ್ಮ ವರದಿ ದಿನಾಂಕ:13.06.2008 ರಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಅವು ಭಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ಇವು ನಕಲಿ ಮದ್ಯವಾಗಿರುತ್ತದೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಕಡತ ಪರಿಶೀಲಿಸಲಾಯಿತು.

1) ಶೋಧನ ಸಮುಚಿತ ಆಧಾರ
2) ಜಪ್ತಿ ಪತ್ರ (ಲಿಸ್ಟ್ ಆಫ್ ಆರ್ಟಿಕಲ್ಸ್)
3) ಮಹಜರ್ ಕ್ರಮ
4) ಸ್ವತ್ತಿನ ಪಟ್ಟಿ
5) ಪ್ರಥಮ ಮಾಹಿತಿ ವರದಿ
6) ರಾಸಾಯನಿಕ ತಜ್ಞರ ವರದಿ

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:21.04.2008ರಂದು ನಂಜನಗೂಡು ತಾಲ್ಲೂಕು, ಬಲಿಗೆರೆ ಹೋಬಳಿ, ಸುತ್ತೂರು ಗ್ರಾಮದ ಶ್ರೀಕಂಠ ಎಂಬುವರ ಮನೆಯ ಮುಂಭಾಗದಲ್ಲಿ ಕೆಎ–55/178 ನೋಂದಣಿ ಸಂಖ್ಯೆಯ ಗೂಡ್ಸ್ ಆಟೋ ವಾಹನದಲ್ಲಿ ಅಕ್ರಮವಾಗಿ 86.400 ಲೀ. ನಕಲಿಯಂತೆ ಇರುವ ಮದ್ಯವನ್ನು ಹೊಂದಿ, ದಾಸ್ತಾನು ಮಾಡಿರುವುದು ಕಂಡುಬಂದಿರುತ್ತದೆ. ಈ ಪ್ರಾಧಿಕಾರದಿಂದ ದಿನಾಂಕ:29.11.2008 ರಂದು ನೀಡಲಾದ ಕಾರಣ ಕೇಳುವ ನೋಟೀಸಿಗೆ ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ) ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು, ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ. ಅಲ್ಲದೇ ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಸಾಗಾಣಿಕೆ / ದಾಸ್ತಾನು ಮತ್ತು ಮಾರಾಟದಂತಹ ವೃತ್ತಿಯಲ್ಲಿ ತೊಡಗಿ, ಸಾರ್ವಜನಿಕರ ಪ್ರಾಣಹಾನಿಯಾಗುವ ಸಾಧ್ಯತೆಗಳನ್ನು

ತಳ್ಳಿಹಾಕುವಂತಿಲ್ಲ. ಆದ ಕಾರಣ ಈ ಕೃತ್ಯ ತನ್ನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (13) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನ ವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/316/2007–08, ದಿನಾಂಕ:4ನೇ ಜೂನ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ನಂಜನಗೂಡು ವಲಯ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:19/2007–08, ದಿನಾಂಕ:21.04.2008 ರಂದು ವಶಪಡಿಸಿಕೊಂಡ ಕೆಎ–55/178 ನೋಂದಣಿ ಸಂಖ್ಯೆಯ ಗೂಡ್ಸ್ ಆಟೋ ವಾಹನವನ್ನು ಮತ್ತು 86.400 ಲೀ. ನಕಲಿ ಮದ್ಯವನ್ನು (ಮಾದರಿಯನ್ನು ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜೂನ್ ತಿಂಗಳ 4ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.604

ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್/07/2008–09, ದಿನಾಂಕ:4ನೇ ಜೂನ್, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು | | ಆರೋಪಿ ಪರಾರಿಯಾಗಿರುತ್ತಾರೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:10.07.2008ರಂದು ಬೆಳಿಗ್ಗೆ 10–30 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು ಇವರು ನಂಜನಗೂಡು ತಾಲ್ಲೂಕು, ಬಿಳಿಗೆರೆ ಹೋಬಳಿ, ಸುತ್ತೂರು–ಹೊಸಕೋಟೆ ರಸ್ತೆ, ಕಪಿಲಾ ನದಿಯ ಸೇತುವೆ ಬಳಿ ಕೆಎ–09/ಕ್ಯೂ–8188 ನೋಂದಣಿ ಸಂಖ್ಯೆಯ ಟಿವಿಎಸ್–50 ಎಕ್ಸ್‌ಎಲ್ ಸೂಪರ್ ವಾಹನದಲ್ಲಿ ಅಕ್ರಮವಾಗಿ 8.640 ಲೀ. ನಕಲಿಯಂತೆ ಕಾಣುವ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ಜಪ್ತು ಮಾಡಿ, ಪ್ರಕರಣ ಸಂಖ್ಯೆ:02/2008–09ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 11, 13(1)(ಎ), 14ರ ರೀತ್ಯಾ ಅಪರಾದವಾಗಿದ್ದು, ಇದೇ ಕಾಯಿದೆ ನಿಯಮ 32, 34, 38(ಎ)ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಆರೋಪಿ ಪರಾರಿಯಾಗಿರುವುದಾಗಿ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು, ದಿನಾಂಕ: 30.07.08ರಲ್ಲಿ ವರದಿಯೊಂದನ್ನು ಸಲ್ಲಿಸಿ, ಆರೋಪಿಯು ಪರಾರಿಯಾಗಿದ್ದು, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:02.09.2008 ರಂದು ಪತ್ರ ಬರೆಯಲಾಗಿದೆ. ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ ದಿ: 05–11–08 ರಂದು ಸಂಬಂಧಪಟ್ಟ ಆರ್.ಟಿ.ಓ. ರವರಿಗೆ ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು, ಸದರಿ ವಾಹನದ 'ಬಿ' ವಹಿಯ ಪ್ರತಿಯನ್ನು ಪಡೆದು, ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಎ.ಎಂ.ಇನಯಾತುಲ್ಲಾ ಬಿನ್ ಮೊಹಮ್ಮದ್ ಹುಸೇನ್, ನಂ. 135, ಬಡಾಮಕಾನ್, ಟಿಪ್ಪು ಸರ್ಕಲ್, ಮೈಸೂರು ಇವರ ಒಡೆತನದಲ್ಲಿದ್ದು ಸದರಿ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿನಾಂಕ:29.11.2008 ರಂದು ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ. ಹಾಗೂ ನಂಜನಗೂಡು ವಲಯದ ಅಬಕಾರಿ ಉಪ ನಿರೀಕ್ಷಕರು, ವಿಳಾಸದಾರರು ಯಾರು ಇರುವುದಿಲ್ಲವೆಂಬ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಕಡತ ಪರಿಶೀಲಿಸಲಾಯಿತು. ದಿನಾಂಕ:10.07.2008 ರಂದು ನಂಜನಗೂಡು ತಾಲ್ಲೂಕು, ಬಿಳಿಗೆರೆ ಹೋಬಳಿ, ಸುತ್ತೂರು–ಹೊಸಕೋಟೆ ರಸ್ತೆ, ಕಪಿಲಾ ನದಿಯ ಸೇತುವೆ ಬಳಿ ಕೆಎ–09/ಕ್ಯೂ–8188 ನೋಂದಣಿ ಸಂಖ್ಯೆಯ ಟಿವಿಎಸ್–50 ಎಕ್ಸ್‌ಎಲ್ ಸೂಪರ್ ವಾಹನದಲ್ಲಿ ಅಕ್ರಮವಾಗಿ 8.640 ಲೀ. ನಕಲಿಯಂತೆ ಕಾಣುವ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ತಲೆ ಮರೆಸಿಕೊಂಡಿರುತ್ತಾನೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ / ವಾಹನ ಮಾಲೀಕರಾಗಲೀ ಈ ಪ್ರಾಧಿಕಾರದ ಮುಂದೆ ತಮ್ಮ ನಿಲುವು ಏನೆಂಬುದನ್ನು ಮತ್ತು ತಮ್ಮ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಪ್ರಥಮ ಮಾಹಿತಿ ವರದಿಯಲ್ಲಿ ಆರೋಪಿಯು ತಲೆ ಮರೆಸಿಕೊಂಡಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (11) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ ನಿರೂಪಿಸಲು ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (11) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಾಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್: 07/2008–09, ದಿನಾಂಕ:4ನೇ ಜೂನ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 02/2008–09, ದಿನಾಂಕ:10.07.08 ರಂದು ವಶಪಡಿಸಿಕೊಂಡ ಕೆಎ–09/ಕ್ಯೂ–8188 ನೋಂದಣಿ ಸಂಖ್ಯೆಯ ಟಿವಿಎಸ್–50 ಎಕ್ಸ್‌ಎಲ್ ಸೂಪರ್ ವಾಹನವನ್ನು ಮತ್ತು 8.640ಲೀ. ನಕಲಿಯಂತೆ ಕಾಣುವ ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜೂನ್ ತಿಂಗಳ 4ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.607

ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್/52/2008–09, ದಿನಾಂಕ:4ನೇ ಜೂನ್, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು. | | ಆರೋಪಿ ಪರಾರಿಯಾಗಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:22.08.2008 ರಂದು ರಾತ್ರಿ 08:30 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು ಇವರು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಹೋಬಳಿ, ಹರದನಹಳ್ಳಿ ಗ್ರಾಮಕ್ಕೆ ಸೇರಿದ, ಹೊಮ್ಮರಗಳ್ಳಿಗೆ ಹೋಗುವ ರಸ್ತೆಯ ಸಣ್ಣ ಸೇತುವೆಯ ಹತ್ತಿರ ಕೆಎ–09/ಹೆಚ್–9788 ನೋಂದಣಿ ಸಂಖ್ಯೆಯ ಟಿವಿಎಸ್ ಚಾಂಪ್ ವಾಹನದಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಮಾಡಿ, ಪ್ರಕರಣ ಸಂಖ್ಯೆ: 04/2008–09ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 11, 13(1)(ಎ), 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯಿದೆ ನಿಯಮ 32, 34, 38(ಎ)ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಆರೋಪಿ ಪರಾರಿಯಾಗಿರುವುದಾಗಿ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:27.11.2008 ರಂದು ಪತ್ರ ಬರೆಯಲಾಗಿದೆ. ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು, ಪ್ರಕರಣದ ಪೂರ್ಣ ದಾಖಲಾತಿಗಳನ್ನು ಮತ್ತು ಸದರಿ ವಾಹನದ 'ಬಿ' ವಹಿಯ ಪ್ರತಿಯನ್ನು ಪಡೆದು, ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಸಾವಿತ್ರಿ ಕೋಂ ಸದಾಶಿವ, ನಂ.2788/4, 1ನೇ ಮೇನ್, ಚಾಮುಂಡಿಪುರಂ, ಮೈಸೂರು ಇವರ ಒಡೆತನದಲ್ಲಿದ್ದು ಸದರಿ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿನಾಂಕ:22.12.2008 ರಂದು ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾದಕ ದ್ರವ್ಯಗಳ ಪೈಕಿ ಮಾದರಿ ತೆಗೆಯಲಾಗದ ಮದ್ಯವನ್ನು ಕೇಂದ್ರ ರಾಸಾಯನಿಕ ಪ್ರಾಯೋಗಾಲಯಕ್ಕೆ ಒಳಪಡಿಸಿ, ದಿನಾಂಕ:23.09.2008ರ ವರದಿಯಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು, ಭಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ಇವು ನಕಲಿ ಮದ್ಯವಾಗಿರುತ್ತವೆಂದು ದೃಢಪಡಿಸಿರುತ್ತಾರೆ. ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಸಾಗಾಣಿಕೆ, ಮಾರಾಟ ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿಕೊಂಡು, ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟುಮಾಡುವುದಲ್ಲದೇ, ಸರ್ಕಾರದ ಉದ್ದೇಶವನ್ನು ವಿಫಲಗೊಳಿಸುವಲ್ಲಿ ಕಾರ್ಯಪ್ರವೃತರಾಗಿರುವುದು ಕಂಡುಬಂದಿರುತ್ತದೆ.

ಕಡತ ಪರಿಶೀಲಿಸಲಾಯಿತು. ದಿನಾಂಕ:22.08.2008 ರಂದು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಹೋಬಳಿ, ಹರದನಹಳ್ಳಿ ಗ್ರಾಮಕ್ಕೆ ಸೇರಿದ, ಹೊಮ್ಮರಗಳ್ಳಿಗೆ ಹೋಗುವ ರಸ್ತೆಯ ಸಣ್ಣ ಸೇತುವೆಯ ಹತ್ತಿರ ಕೆಎ–09/ಹೆಚ್–9788 ನೋಂದಣಿ ಸಂಖ್ಯೆಯ ಟಿವಿಎಸ್ ಚಾಂಪ್ ವಾಹನದಲ್ಲಿ ಅಕ್ರಮವಾಗಿ 8.640 ಲೀ. ನಕಲಿ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ತಲೆ ಮರೆಸಿಕೊಂಡಿರುತ್ತಾನೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ / ವಾಹನ ಮಾಲೀಕರಾಗಲೀ ಈ ಪ್ರಾಧಿಕಾರದ ಮುಂದೆ ತಮ್ಮ ನಿಲುವು ಏನೆಂಬುದನ್ನು ಮತ್ತು ತಮ್ಮ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಪ್ರಥಮ ಮಾಹಿತಿ ವರದಿಯಲ್ಲಿ ಆರೋಪಿಯು ತಲೆ ಮರೆಸಿಕೊಂಡಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (9) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ ನಿರೂಪಿಸಲು ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (9) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಾಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್: 52/2008–09, ದಿನಾಂಕ:4ನೇ ಜೂನ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 04/2008–09, ದಿನಾಂಕ:22.08.2008 ರಂದು ವಶಪಡಿಸಿಕೊಂಡ ಕೆಎ–09/ಹೆಚ್–9788 ನೋಂದಣಿ ಸಂಖ್ಯೆಯ ಟಿವಿಎಸ್ ಚಾಂಪ್ ವಾಹನ ಮತ್ತು 8.640ಲೀ. ನಕಲಿ ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜೂನ್ ತಿಂಗಳ 4ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.606 ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/412/2007–08, ದಿನಾಂಕ:4ನೇ ಜೂನ್, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು. | | ಮಂಜುಳ ಕೋಂ ಮಂಜು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:26.03.2008ರಂದು ರಾತ್ರಿ 7:50 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಮುಖ್ಯ ರಸ್ತೆ, ದೇಬೂರು ಗ್ರಾಮದ ಮಂಜು ಬಿನ್ ಕರೀಗೌಡ ಇವರ ಮನೆಯ ಮುಂಭಾಗದಲ್ಲಿ ಕೆಎ–03/ಇಡಿ–7442 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನದಲ್ಲಿ ಅಕ್ರಮವಾಗಿ 19.980 ಲೀ. ನಕಲಿ ಮದ್ಯ ಮತ್ತು ಅಂಗಡಿ ಮನೆಯಲ್ಲಿ 1 ಲೀ. ಬ್ಲೆಂಡ್ ಮದ್ಯ ಮತ್ತು ಖಾಲಿ ಸೀಸೆಗಳನ್ನು ಹೊಂದಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: 16/2007–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 13(1)(ಎ), 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 34, 38(ಎ) ಮತ್ತು 43(ಎ)ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಮಂಜುಳ ಕೋಂ ಮಂಜು ಎಂಬ ಆರೋಪಿಯನ್ನು ಬಂಧಿಸಿ, ನ್ಯಾಯಾಲಯದ ವಶಕ್ಕೆ ಒಪ್ಪಿಸಿರುವುದಾಗಿ ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಬೆಂಗಳೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:15.07.2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ ದಿನಾಂಕ:05.11.2008 ರಂದು ಮತ್ತೊಮ್ಮೆ ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ದಿನಾಂಕ:08.12.2008ರ ಪತ್ರದಲ್ಲಿ 'ಬಿ' ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಅದರಂತೆ ವಾಹನ ಮಾಲೀಕರಾದ ಹೆಚ್.ಎ.ಅಂಬಿಕಾ ಕೋಂ ವಿ.ಪ್ರಮೇಶ್, ನಂ.431/1, ಅಂಥೋನಿ ಅಮ್ಮಾಳ್ ನಿಲಯ, ಜೀವನ್ ಭೀಮಾ ನಗರ,

ಅನಂತಪುರಂ, ಬಡಾವಣೆ, ಬೆಂಗಳೂರು ಇವರ ಒಡೆತನದಲ್ಲಿದ್ದು, ಸದರಿಯವರಿಗೆ ದಿನಾಂಕ:03.01.2009 ರಂದು ಕಲಂ 43(ಬಿ)ರ ಅಡಿಯಲ್ಲಿ ವಾಹನ ಮತ್ತು ಮದ್ಯವನ್ನು ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ವಿಳಾಸದಲ್ಲಿಲ್ಲವೆಂಬ ಷರಾದೊಂದಿಗೆ ಸದರಿ ನೋಟೀಸ್‌ನ್ನು ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ.

ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಮಾದಕ ದ್ರವ್ಯಗಳನ್ನು ಬೆಂಗಳೂರಿನ ಮುಖ್ಯ ರಾಸಾಯನಿಕ ತಜ್ಞರಿಗೆ ಕಳುಹಿಸಲಾಗಿರುತ್ತದೆ. ಸದರಿಯವರು ತಮ್ಮ ವರದಿ ದಿನಾಂಕ:13.06.2008ರಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಅವು ಭಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ಇವು ನಕಲಿ ಮದ್ಯವಾಗಿರುತ್ತದೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಕಡತ ಪರಿಶೀಲಿಸಲಾಯಿತು.

1) ಶೋಧನ ಸಮುಚಿತ ಆಧಾರ
2) ಜಪ್ತಿ ಪತ್ರ (ಲಿಸ್ಟ್ ಆಫ್ ಆರ್ಟಿಕಲ್ಸ್)
3) ಮಹಜರ್ ಕ್ರಮ
4) ಸ್ವತ್ತಿನ ಪಟ್ಟಿ
5) ಪ್ರಥಮ ಮಾಹಿತಿ ವರದಿ
6) ರಾಸಾಯನಿಕ ತಜ್ಞರ ವರದಿ

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:26.03.2008 ರಂದು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಮುಖ್ಯ ರಸ್ತೆ, ದೇಬೂರು ಗ್ರಾಮದ ಮಂಜು ಬಿನ್ ಕರಿಗೌಡ ಇವರ ಮನೆಯ ಮುಂಭಾಗದಲ್ಲಿ ಕೆಎ–03/ಇಡಿ–7442 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸ್‌ಎಲ್ ಸೂಪರ್ ವಾಹನದಲ್ಲಿ ಅಕ್ರಮವಾಗಿ 19.980 ಲೀ. ನಕಲಿ ಮದ್ಯ ಮತ್ತು ಅಂಗಡಿ ಮನೆಯಲ್ಲಿ 1 ಲೀ. ಬ್ಲೆಂಡ್ ಮದ್ಯ ಮತ್ತು ಖಾಲಿ ಸೀಸೆಗಳನ್ನು ಹೊಂದಿದ್ದುದು ಕಂಡುಬಂದಿರುತ್ತದೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ / ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದುವರೆವಿಗೂ ಈ ಪ್ರಾಧಿಕಾರದ ಮುಂದೆ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ) ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು, ಅಲ್ಲದೇ ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಸಾಗಾಣಿಕೆ / ದಾಸ್ತಾನು ಮತ್ತು ಮಾರಾಟದಂತಹ ವೃತ್ತಿಯಲ್ಲಿ ತೊಡಗಿಕೊಂಡು, ಸಾರ್ವಜನಿಕರ ಪ್ರಾಣಹಾನಿ ಮತ್ತು ನೆಮ್ಮದಿಗೆ ಭಂಗ ತರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಆದ ಕಾರಣ ಈ ಕೃತ್ಯ ತನ್ನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (14) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಫ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಾಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್: 412/2007–08, ದಿನಾಂಕ:4ನೇ ಜೂನ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 (ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:16/2007–08, ದಿನಾಂಕ:26.03.2008 ರಂದು ವಶಪಡಿಸಿಕೊಂಡ ಕೆಎ–03/ಇಡಿ–7442 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸ್‌ಎಲ್ ಸೂಪರ್ ವಾಹನ ಮತ್ತು 19.980 ಲೀ. ನಕಲಿ ಮದ್ಯವನ್ನು (ಮಾದರಿಯನ್ನು ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

